CPMG / KA / BG-GPO/13 / 2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜುಲೈ ೨೯, ೨೦೦೪ (ಶ್ರಾವಣ ೭, ಶಕ ವರ್ಷ ೧೯೨೬) | ಸಂಚಿಕೆ ೩೧ |
|---|---|---|

## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 15 ಎಲ್‌ಡಬ್ಲ್ಯೂಎ 2004 ಬೆಂಗಳೂರು, ದಿನಾಂಕ: 5ನೇ ಜುಲೈ 2004**

ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ: 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಅಧಿಸೂಚನೆ ಸಂಖ್ಯೆ:ಕಾಇ 10 ಎಲ್‌ಡಬ್ಲ್ಯೂಎ 2003, ದಿನಾಂಕ: 16.12.2003ರಲ್ಲಿ "ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ" ಯನ್ನು 'ಸಾರ್ವಜನಿಕ ಅಗತ್ಯ ಸೇವೆ' ಎಂಬುದಾಗಿ ದಿನಾಂಕ: 19.09.2003 ರಿಂದ ಮುಂದಿನ ಆರು ತಿಂಗಳ ಅವಧಿಗೆ ಜಾರಿಯಲ್ಲಿರುವಂತೆ ವಿಸ್ತರಣೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಸಂಸ್ಥೆಯನ್ನು ಇನ್ನೂ ಆರು ತಿಂಗಳ ಕಾಲ 'ಸಾರ್ವಜನಿಕೆ ಅಗತ್ಯ ಸೇವೆ' ಎಂದು ಘೋಷಿಸುವುದು ಅವಶ್ಯಕವೆಂದು ಕರ್ನಾಟಕ ಸರ್ಕಾರವು ಪರಿಗಣಿಸಿದೆ. ಆದುದರಿಂದ ಕರ್ನಾಟಕ ಸರ್ಕಾರವು ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರ ಕಾಯ್ದೆ 1947 ರ ಸಂಖ್ಯೆ: 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ "ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ"ಯನ್ನು 'ಸಾರ್ವಜನಿಕ ಅಗತ್ಯಸೇವೆ' ಎಂಬುದಾಗಿ ದಿನಾಂಕ: 19.03.2004 ರಿಂದ ಮುಂದಿನ ಆರು ತಿಂಗಳ ಅವಧಿಗೆ ಜಾರಿಯಲ್ಲಿರುವಂತೆ ವಿಸ್ತರಿಸಿ ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 434

**ಗೋಪಾಲ್**

ಪೀಠಾಧಿಕಾರಿ-2, ಕಾರ್ಮಿಕ ಇಲಾಖೆ.

**ENERGY SECRETARIAT**

**NOTIFICATION**

**No. EN 85 EEB 2004 Bangalore, dated: 5th July 2004**

In exercise of the powers conferred by Article 74 of the Memorandum and Articles of Association of Bangalore Electricity Supply Company Limited, Sri V. M. Chandre Gowda Chief Engineer, Bangalore Metropolitan Area Zone, BESCOM is appointed as Director (Technical) on the Board of Bangalore Electricity Supply Company Limited in place of Sri Muniswamy M., Director (Technical) transferred with immediate effect and until further orders.

In exercise of the powers conferred by Article 74 of the Memorandum and Articles of Association of Hubli Electricity Supply Company Limited, Sri Muniswamy M., Director (Technical), BESCOM is appointed as Director (Technical) on the Board of Hubli Electricity Supply Company Limited to the existing vacancy with immediate effect and until further orders.

By Order and in the Name of the Governor of Karnataka,

**K. L. JAYARAM**

PR-432

Under Secretary to Government,
Energy Department.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 42 ಸಿಎನ್‌ಎಸ್ 2004 ಬೆಂಗಳೂರು, ದಿನಾಂಕ: 29ನೇ ಜುಲೈ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಕೋಲಾರ ಜಿಲ್ಲೆ ಬಂಗಾರಪೇಟೆ ತಾಲ್ಲೂಕಿನ ಆಲಂಬಾಡಿ ಜ್ಯೋತೇನಹಳ್ಳಿ ಸೇವಾ ಸಹಕಾರ ಸಂಘ ನಿ., ಆಲಂಬಾಡಿ ಜ್ಯೋತೇನಹಳ್ಳಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಪಿಳ್ಳಮ್ಮ ಕೋಂ ಎಂ. ಪಾಪಣ್ಣ ಜ್ಯೋತೇನಹಳ್ಳಿ, ಬೂದಿಕೋಟೆ ಅಂಚೆ, ಬಂಗಾರಪೇಟೆ ತಾಲ್ಲೂಕು.
2. ಶ್ರೀ ವೆಂಕಟಮುನಿಯಪ್ಪ ಬಿನ್ ಹುಚ್ಚಪ್ಪ, ಆಲಂಬಾಡಿ, ಬಂಗಾರಪೇಟೆ ತಾಲ್ಲೂಕು
3. ಶ್ರೀ ಕೃಷ್ಣಪ್ಪ ಬಿನ್ ಅಪ್ಪಯ್ಯ, ಕಾರ್ಮೋನಹಳ್ಳಿ, ಬೂದಿಕೋಟೆ ಅಂಚೆ, ಬಂಗಾರಪೇಟೆ ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 435

**ಆರ್. ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕೃತೋಇ 19 ಕೃಇಮಂ 2004(ಭಾಗ) ಬೆಂಗಳೂರು, ದಿನಾಂಕ: 8ನೇ ಜುಲೈ 2004**

ಕರ್ನಾಟಕ ಸ್ಟೇಟ್ ಆಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡ್‌ನ ಅಂತರ ನಿಯಮಾವಳಿಯ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 5 ಬಿ (i) (ii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಶಿವಕುಮಾರ್ ಜಿ. ಗುಂದಗಿ ಇವರನ್ನು ಸರ್ಕಾರದ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ), ಕೃಷಿ ಮತ್ತು ತೋಟಗಾರಿಕೆ ಇಲಾಖೆ ಇವರ ಬದಲಿಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಸ್ಟೇಟ್ ಆಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡ್‌ನ ನಿರ್ದೇಶಕ ಮಂಡಳಿಯ ನಿರ್ದೇಶಕರನ್ನಾಗಿ ಹಾಗೂ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 436

**ಎಂ. ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಾರಿಇ 26 ಎಸ್‌ಟಿಯು 2004 ಬೆಂಗಳೂರು, ದಿನಾಂಕ: 7ನೇ ಜುಲೈ 2004**

ಅಧಿಸೂಚನೆ ಸಂಖ್ಯೆ ಹೆಚ್‌ಟಿಡಿ 139 ಟಿಆರ್‌ಎ 2003, ದಿನಾಂಕ: 23.05.2003ರ ಕ್ರಮ ಸಂಖ್ಯೆ 13ನ್ನು ಭಾಗಶಃ ಮಾರ್ಪಡಿಸಿ ಜಂಟಿ ಸಾರಿಗೆ ಆಯುಕ್ತರು (ಗುಪ್ತದಳ ಮತ್ತು ವಾಯುಮಾಲಿನ್ಯ) ಇವರನ್ನು ಜಂಟಿ ಸಾರಿಗೆ ಆಯುಕ್ತರು (ಪ್ರವರ್ತನ) ಬದಲಿಗೆ "Action Group for Vehicular Air Pollution Management Initiative"ಗೆ ಸಂಚಾಲಕರನ್ನಾಗಿ (Convener) ಸರ್ಕಾರವು ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 437

**ಕೆ. ಲಕ್ಷ್ಮೀಕಾಂತ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಾರಿಇ 101 ಸಾಇಸೇ 2004 ಬೆಂಗಳೂರು, ದಿನಾಂಕ: 6ನೇ ಜುಲೈ 2004**

ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂ:ಜಿಒಬಿ (1)1/2004, ದಿನಾಂಕ: 26.6.2004ರಲ್ಲಿ ಶ್ರೀ ಪಿ. ವಿ.ಹೊಗಡೆ, ಅಧ್ಯಕ್ಷಾಧಿಕಾರಿ, ಕರ್ನಾಟಕ ರಾಜ್ಯ ಸಾರಿಗೆ ಮೇಲ್ಮನವಿ ನ್ಯಾಯಾಧಿಕರಣ ಇವರು ದಿನಾಂಕ: 30.6.2004 ರಂದು ವಯೋ ನಿವೃತ್ತಿ ಹೊಂದಿರುವುದರಿಂದ, ಅಧ್ಯಕ್ಷಾಧಿಕಾರಿ, ಕರ್ನಾಟಕ ರಾಜ್ಯ ಸಾರಿಗೆ ಮೇಲ್ಮನವಿ ನ್ಯಾಯಾಧಿಕರಣ ಈ ಹುದ್ದೆಗೆ ನೇಮಕ ಮಾಡಲು

ಶ್ರೀ ಶೇಟ್‌ಕರ್ ಸುಭಾಸ್, ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, ಬೆಂಗಳೂರು ಇವರ ಸೇವೆಯನ್ನು ಸರ್ಕಾರಕ್ಕೆ ನೀಡಲಾಗಿದ್ದು, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶವಾಗುವವರೆಗೆ ಅಧ್ಯಕ್ಷಾಧಿಕಾರಿ, ಕರ್ನಾಟಕ ರಾಜ್ಯ ಸಾರಿಗೆ ಮೇಲ್ಮನವಿ ನ್ಯಾಯಾಧೀಕರಣ ಬೆಂಗಳೂರು ಇಲ್ಲಿ ಎಂದು ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 438

**ಕೆ. ಲಕ್ಷ್ಮೀಕಾಂತ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಕಂಇ 53 ಮುಆಬಿ 2004 ಬೆಂಗಳೂರು, ದಿನಾಂಕ: 14ನೇ ಜುಲೈ 2004**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ದರ್ದಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 23 ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 77 ಎಂಆಟಿ 2003 ದಿನಾಂಕ: 30.4.2003 ರಲ್ಲಿ ಪ್ರಕಟಿಸಲಾದ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯ ಕ್ರಮಸಂಖ್ಯೆ: 11 ರಲ್ಲಿ ಪ್ರಕಟಿಸಲಾದ

| ಹಾಲಿ ಇರುವುದು | ತಿದ್ದಿ ಓದಿಕೊಳ್ಳುವುದು |
|---|---|
| ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನ ವಂದಿಗೆ ಗ್ರಾಮದ ಹೊಲೆ ಚಪ್ಪರದೇವ ಕ್ರಮಸಂಖ್ಯೆ: 11 | ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ವಂದಿಗೆ ಗ್ರಾಮದ ಶ್ರೀ ಹೊಲೆವಟ್ಟಿರ ದೇವ |

ಹಾಲಿ ಇರುವುದನ್ನು ಮೇಲಿನಂತೆ ತಿದ್ದಿ ಓದಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 442

**ಕೆ. ಜಯಚಂದ್ರ**

ಪೀಠಾಧಿಕಾರಿ,

ಕಂದಾಯ ಇಲಾಖೆ. (ಮುಜರಾಯಿ).

**ಅಧಿಸೂಚನೆ**

**ಸಂಖ್ಯೆ:ಕಂಇ 68 ಮುಆಬಿ 2004 ಬೆಂಗಳೂರು, ದಿನಾಂಕ: 17ನೇ ಜುಲೈ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.4.2003ರಲ್ಲಿ ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯ ಕ್ರಮಸಂಖ್ಯೆ: 119 ರಲ್ಲಿ ಪ್ರಕಟಿಸಲಾದ ಶ್ರೀಗ್ರಾಮದೇವಿ ದೇವಸ್ಥಾನದ ಗ್ರಾಮದ ಹೆಸರನ್ನು ಈ ಕೆಳಕಂಡಂತೆ ಹಾಲಿ ಇರುವುದನ್ನು ತಿದ್ದಿ ಓದಿಕೊಳ್ಳುವುದು.

| ಹಾಲಿ ಇರುವುದು | ತಿದ್ದಿ ಓದಿಕೊಳ್ಳುವುದು |
|---|---|
| ಶ್ರೀ ಗ್ರಾಮದೇವಿ ದೇವಸ್ಥಾನ ಹುಲ್ಲುಂಜಿ ಗ್ರಾಮ ಕಲಘಲಗಿ ತಾಲ್ಲೂಕು ಧಾರವಾಡ ಜಿಲ್ಲೆ. | ಶ್ರೀ ಗ್ರಾಮದೇವಿ ದೇವಸ್ಥಾನ ಹುಲ್ಲುಂಬಿ ಗ್ರಾಮ ಕಲಘಟಗಿ ತಾಲ್ಲೂಕು ಧಾರವಾಡ ಜಿಲ್ಲೆ. |

ಹಾಲಿ ಇರುವುದನ್ನು ಮೇಲಿನಂತೆ ತಿದ್ದಿ ಓದಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 443

**ಕೆ. ಜಯಚಂದ್ರ**

ಪೀಠಾಧಿಕಾರಿ,

ಕಂದಾಯ ಇಲಾಖೆ. (ಮುಜರಾಯಿ).

**ಅಧಿಸೂಚನೆ**

**ಸಂಖ್ಯೆ:ಕಂಇ 329 ಮುನೋಮು 2004 ಬೆಂಗಳೂರು, ದಿನಾಂಕ: 12ನೇ ಜುಲೈ 2004**

ನೋಂದಣಿ ಮತ್ತು ಕಾಯ್ದೆ 1957ರ (1957ರ ಕರ್ನಾಟಕ ಕಾಯ್ದೆ-34) 9 (1) ಬಿ, ಕರ್ನಾಟಕ ಮುದ್ರಾಂಕ ನಿಯಮಗಳು 1958ರ ನಿಯಮ 11-ಎ(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೋಟಾರ್ ಇಂಡಸ್ಟ್ರೀಸ್ ಕಂಪನಿ ಲಿಮಿಟೆಡ್, ಬೆಂಗಳೂರು ಇವರು ಒಟ್ಟು 20,29,43,900/- ರೂಪಾಯಿಗಳ ಮೌಲ್ಯದ ಷೇರುಗಳನ್ನು ವಿತರಿಸಲು ತಗಲುವ ಸಂಚಿತ ಮುದ್ರಾಂಕ ಶುಲ್ಕವನ್ನು ದಿನಾಂಕ: 30.6.2004 ರಂದು ಒಟ್ಟು 2,02,994/- (ಎರಡು ಲಕ್ಷದ ಎರಡು ಸಾವಿರದ ಒಂಬೈನೂರು ತೊಂಭತ್ತನಾಲ್ಕು ರೂಪಾಯಿಗಳು ಮಾತ್ರ) ರೂಪಾಯಿಗಳನ್ನು ಸಂದಾಯಿಸಿರುತ್ತಾರೆಂದು ಕರ್ನಾಟಕ ಸರ್ಕಾರವು ಪ್ರಕಟಿಸುತ್ತದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂ.ಇ. 329 ಮುನೋಮು 2004, ದಿನಾಂಕ: 12.07.2004ರ ಪ್ರಕಾರ ಸಂಚಿತ ಮುದ್ರಾಂಕ ಶುಲ್ಕವನ್ನು ಮೊದಲ ಬಾರಿಗೆ ಸಂದಾಯಿಸಲಾಗಿದೆ.

ಕರ್ನಾಟಕ ಮುದ್ರಾಂಕ ನಿಯಮಾವಳಿಗಳ ನಿಯಮ 11-ಎ(3)ರ ಪ್ರಕಾರ ಸದರಿ ಸಂಸ್ಥೆಯು ವರ್ಗಾಯಿಸಿದ ನಿರ್ದಿಷ್ಟ ಸಂಖ್ಯೆಯ ಷೇರುಗಳ ವರದಿಯನ್ನು ಸರ್ಕಾರಕ್ಕೆ ತಪ್ಪದೇ ಕಳುಹಿಸತಕ್ಕದ್ದು, ಹಾಗೂ ಕರ್ನಾಟಕ ಮುದ್ರಾಂಕ ನಿಯಮಾವಳಿಯಲ್ಲಿನ ನಿಯಮ 11-ಎ(4)ರ ಪ್ರಕಾರ ಸರ್ಕಾರದ ಸಂಬಂಧಪಟ್ಟ ಅಧಿಕಾರಿಗಳು ಷೇರುಗಳ ವಿತರಣೆಗೆ ಸಂಬಂಧಿಸಿದಂತೆ ನಿರ್ವಹಿಸಲಾದ ರಿಜಿಸ್ಟರ್ ಪುಸ್ತಕ, ದಾಖಲೆಗಳನ್ನು ಪರಿಶೀಲಿಸಲು ಮತ್ತು ತಪಾಸಣೆ ನಡೆಸಲು ಸದರಿ ಸಂಸ್ಥೆಯು ಅವಕಾಶ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 444

**ಡಿ. ಎನ್. ಶ್ರೀಮುಖಿ**

ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## ಇಂಧನ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಇಂಇ 175 ಇಇಬಿ 2003 ಬೆಂಗಳೂರು, ದಿನಾಂಕ: 14ನೇ ಜುಲೈ 2004**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯನ್ನು ಆಡಳಿತದ ಹಿತದೃಷ್ಟಿಯಿಂದ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ನಿಯಮಾವಳಿ (ಮೆಮೊರಾಂಡಂ ಆಫ್ ಅಸೋಸಿಯೇಷನ್)ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡ ಅಧ್ಯಕ್ಷರು ಹಾಗೂ ನಿರ್ದೇಶಕರುಗಳನ್ನೊಳಗೊಂಡಂತೆ ನಿರ್ದೇಶಕರ ಮಂಡಳಿಯನ್ನು ಪುನರ್ ರಚಿಸಲಾಗಿದೆ:

1) ಶ್ರೀ ಹೆಚ್. ಡಿ. ರೇವಣ್ಣ, ಮಾನ್ಯ ಲೋಕೋಪಯೋಗಿ ಮತ್ತು ಇಂಧನ ಸಚಿವರು - ಅಧ್ಯಕ್ಷರು
2) ಶ್ರೀ ಮಧು, ಐ.ಎ.ಎಸ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ - ನಿರ್ದೇಶಕರು
3) ಶ್ರೀಮತಿ ಜಿ. ಎಸ್. ಕಲ್ಪನ, ಐ.ಎ.ಎಸ್. ನಿರ್ದೇಶಕರು (ಸಿಬ್ಬಂದಿ) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ - ನಿರ್ದೇಶಕರು
4) ಶ್ರೀಮತಿ ಅದಿತಿರಾಜ ನಿರ್ದೇಶಕರು (ಹಣಕಾಸು) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ - ನಿರ್ದೇಶಕರು
5) ಶ್ರೀ ಎಸ್. ಶಿವಮಲ್ಲು ನಿರ್ದೇಶಕರು (ಪ್ರಸರಣ) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ - ನಿರ್ದೇಶಕರು
6) ಶ್ರೀ ಕೆ. ಪಿ. ಪಾಂಡೆ, ಐ.ಎ.ಎಸ್., ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ. - ನಿರ್ದೇಶಕರು
7) ಶ್ರೀ ದಿಲೀಪ್‌ರಾವ್, ಐ.ಎ.ಎಸ್. ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆ - ನಿರ್ದೇಶಕರು
8) ಶ್ರೀ ಬಾಬಗೌಡ ರುದ್ರಗೌಡ ಪಾಟೀಲ್ ಚಿಕ್ಕಬಾಗೇವಾಡಿ ಅಂಚೆ, ಬೈಲಹೊಂಗಲ್ ತಾಲ್ಲೂಕು, ಬೆಳಗಾಂ ಜಿಲ್ಲೆ. - ನಿರ್ದೇಶಕರು
9) ಶ್ರೀ ಎಲ್. ವಿ. ನಾಗರಾಜನ್, ಐ.ಎ.ಎಸ್. ವ್ಯವಸ್ಥಾಪಕ ನಿರ್ದೇಶಕರು. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ - ನಿರ್ದೇಶಕರು
10) ಶ್ರೀ ಭರತ್‌ಲಾಲ್‌ಮೀನಾ, ಐ.ಎ.ಎಸ್. ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ - ನಿರ್ದೇಶಕರು
11) ಶ್ರೀ ಕೆ. ಎಂ. ಮೋನಪ್ಪ, ಐ.ಎ.ಎಸ್. ವ್ಯವಸ್ಥಾಪಕ ನಿರ್ದೇಶಕರು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ - ನಿರ್ದೇಶಕರು
12) ಶ್ರೀ ಕೆ. ಸಿ. ರೆಡ್ಡಿ ಲೋಕೋಪಯೋಗಿ ಮತ್ತು ಇಂಧನ ಇಲಾಖೆಯ ಸಲಹೆಗಾರರು - ನಿರ್ದೇಶಕರು
13) ಶ್ರೀ ಸಿ. ನಾರಾಯಣಗೌಡ ಅಧ್ಯಕ್ಷರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನೌಕರರ ಸಂಘ - ನಿರ್ದೇಶಕರು
14) ಶ್ರೀ ಕೆ. ಪ್ರಸನ್ನಕುಮಾರ್ ಬಿ. ಇ. (ಎಲೆಕ್ಟ್ರಿಕಲ್) ನಂ. 33, ಪ್ರಶಾಂತ ನಿಲಯ, 4ನೇ ಅಡ್ಡರಸ್ತೆ, 8ನೇ ಮುಖ್ಯ ರಸ್ತೆ, ಆರ್.ಎಂ.ವಿ. ಎಕ್ಸ್‌ಟೆನ್‌ಸನ್ ಬೆಂಗಳೂರು - ನಿರ್ದೇಶಕರು
15) ಶ್ರೀ ಬಿ. ಟಿ. ಜ್ಞಾನೇಶ್ವರ ನಿವೃತ್ತ ಚೀಫ್ ಇಂಜಿನಿಯರ್, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು. - ನಿರ್ದೇಶಕರು
16) ಶ್ರೀ ಎಸ್. ರವಿನಾರಾಯಣನ್ ಬಿ. ಇ. (ಎಲೆಕ್ಟ್ರಿಕಲ್ಸ್ ಮತ್ತು ಎಲೆಕ್ಟ್ರಾನಿಕ್ಸ್) ನಂ. 387, 42ನೇ ಕ್ರಾಸ್, 5ನೇ ಬ್ಲಾಕ್, ಜಯನಗರ, ಬೆಂಗಳೂರು-41. - ನಿರ್ದೇಶಕರು

ಈ ಹಿಂದೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮಂಡಳಿಯ ಅಧ್ಯಕ್ಷರು ಹಾಗೂ ನಿರ್ದೇಶಕರನ್ನಾಗಿ ಹೊರಡಿಸಿದ ಎಲ್ಲಾ ಆದೇಶಗಳನ್ನು, ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಭವಿಷ್ಯವರ್ತಿಯಾಗಿ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 445

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## HOME SECRETARIAT

## NOTIFICATION

**No. HD 67 POP 2004 Bangalore, dated: 15th July 2004**

In exercise of the powers conferred by clause (s) of Section 2 of the Code of Criminal Procedure, 1973 (Central Act 2 of 1974) and in partial modification of earlier notifications issued in this behalf, the

Government of Karnataka hereby declare that with effect from the date of publication of this Notification in the Official Gazette, the areas and places specified in column (4) of the Schedule below, shall cease to be within the jurisdiction of the Police Station specified in column (5) thereof and the said areas and places shall be included within the jurisdiction of the Police Station specified in column (3).

**SCHEDULE**

| Sl. No. | Name of the District Police Sub-Division/ Police Circle | Name of the Police Station in which the area and places specified in Column 3 shall be included | Name of the areas and places | Name of the Police Station from the jurisdiction of which the areas and places specified in column 3 shall be excluded |
|---|---|---|---|---|
| 1 | 2 | 3 | 4 | 5 |
| 1 | Udupi District, Udupi Sub-Division, Brahmavar Circle | Karkala Town Police Station | 1) Yerlapady<br>2) Bailoor<br>3) Neere | Hiriadka Police Station |
| 2 | Udupi District, Karkala Sub-Division, Karkala Circle | Karkala Town Police Station | Hirgana | Karkala Rural Police Station |
| 3 | Dakshina Kannada District, Panambur Sub-Division, Panambur Circle | Karkala Rural Police Station | 1) Nooralbettu<br>2) Idu<br>3) Kanthavar | Mudabidri Police Station. |

By Order and in the Name of Governor of Karnataka,

**S. RAJU**

PR-446

Under Secretary to Government,
Home Department, (Police Expenditure).

**TRANSPORT SECRETARIAT**

**NOTIFICATION**

**No. HTD 427 TMA 2003 Bangalore, dated: 14th July 2004**

In exercise of the powers conferred by clause (b) of sub-section (3) of section 110 of the Motor Vehicle Act. 1988 (Central Act 59 of 1988) read with Notification No. GSR 583(E), dated: 12.09.1991 the Government of Karnataka hereby exempts the five goods Transport Vehicles purchased by Sri. B. Venugopal. Bangalore from Ashok lay-land model "PSU-4/19/222-WB-Viking Goods" bearing chassis No. (i) FVE-503528 (ii) FVE-503623, (iii) FVE-504064, (iv) FVE-503557 (v) FVE-504001" Which are 0.30 meter excess in length and over hang of 10 percent more than stipulated length from the provisions of rule 93 of the Central Motor Vehicles Rules 1989 subject to the Provisions of the Overall Dimension of Motor Vehicles (Prescription of Conditions for Exemption) Rules, 1991.

By Order and in the Name of Governor of Karnataka,

**K. LAKSHMIKANTHA**

PR-440

Under Secretary to Government, Transport Department.

**HOME SECRETARIAT**

**NOTIFICATION No. HD 87 POP 2004 Bangalore, dated: 15th July 2004**

In exercise of the powers conferred by clause (s) of Section 2 of the Code of Criminal Procedure, 1973 (Central Act 2 of 1974) and in partial modification of earlier notifications issued in this behalf, the Government of Karnataka hereby declare that with effect from the date of publication of this Notification in the Official Gazette, the areas and places specified in column (3) of the Schedule below, shall cease to be within the jurisdiction of the Police Station specified in column (4) thereof and the said areas and places shall be included within the jurisdiction of the Police Station specified in column (2).

**SCHEDULE**

| Name of the District Police Sub-Division/ Police Circle | Name of the Police Station in whichthe area and places specified in Column 3 shall be included | Name of the areas and places | Name of the Police Station from the jurisdiction of which the areas and places specified in column 3 shall be excluded |
|---|---|---|---|
| 1 | 2 | 3 | 4 |

| 1 | 2 | 3 | 4 |
|---|---|---|---|
| Kolar District/ Chikkaballapur Sub-Division/ Chikkaballapur Circle | Chikkaballapur Rural Police Station | (1) Kethenahalli<br>(2) Adi madagu<br>(3) Sadenahalli<br>(4) Yaramadenahalli<br>(5) Nyasthigamahalli<br>(6) Narenahalli<br>(7) Kondenahalli<br>(8) Yarangenahalli | Gudibande Police Station |

By Order and in the Name of Governor of Karnataka,

**S. RAJU**

PR-447

Under Secretary to Government,
Home Department, (Police Expenditure).

**NOTIFICATION**

**No. HD 88 POP 2004 Bangalore, dated: 15th July 2004**

In exercise of the powers conferred by clause (s) of Section 2 of the Code of Criminal Procedure, 1973 (Central Act 2 of 1974) the Government of Karnataka hereby declare that with effect from the date of publication of this Notification in the Official Gazette, the areas and places specified in column (3) of the Schedule below, shall cease to be within the jurisdiction of the Police Station specified in column (4) thereof and the said areas and places shall be included within the jurisdiction of the Police Station specified in column (2).

**SCHEDULE**

| Name of the District Police Division and Police Sub-Division | Police Station in which the area and places specified in Column (3) shall be included | Name of the areas and places | Police Station from whose jurisdiction the areas and places specified in column (3) shall be excluded |
|---|---|---|---|
| 1 | 2 | 3 | 4 |
| Belgaum District Bailhongal Sub-Division Bailhongal Circle | Bailhongal Police Station | 1. Navalagatti<br>2. Pularkoppa<br>3. Shigihalli<br>4. Ganikoppa<br>5. Marikatti | Bagewadi Police Station |

By Order and in the Name of Governor of Karnataka,

**S. RAJU**

PR-448

Under Secretary to Government,
Home Department, (Police Expenditure).

**NOTIFICATION**

**No. HD 89 POP 2004 Bangalore, dated: 15th July 2004**

In exercise of the powers conferred by clause (s) of Section 2 of the Code of Criminal Procedure, 1973 (Central Act 2 of 1974) and in partial modification of earlier notifications issued in this behalf, the Government of Karnataka hereby declare that with effect from the date of publication of this Notification in the Official Gazette, the areas and places specified in column (3) of the Schedule below, shall cease to be within the jurisdiction of the Police Station specified in column (4) thereof and the said areas and places shall be included within the jurisdiction of the Police Station specified in column (2).

**SCHEDULE**

| Name of the District/ Police Sub-Division/ Police Circle | Name of the Police Station in which the area and places specified in Column 3 shall be included | Name of the areas and places | Name of the Police Station from the jurisdiction of which the areas and places specified in column 3 shall be excluded |
|---|---|---|---|
| 1 | 2 | 3 | 4 |

| 1 | 2 | 3 | 4 |
|---|---|---|---|
| | Shorapur Police Station | (1) Kannalli<br>(2) Devatkal<br>(3) Bachimatti<br>(4) Chikkanalli<br>(5) Channapattan<br>(6) Godihal<br>(7) Haltavi<br>(8) Hunasihole | Hunasgi Police station |
| Gulbarga District, Yadgir Sub-Division Shorapur Circle | Hunasgi Police Station | (1) Siddapur<br>(2) Bailapur<br>(3) Bailapur Tanda<br>(4) Srinivaspur<br>(5) Kanagandana Halli<br>(6) Manjalapur<br>(7) Kamanatgi<br>(8) Balashettihal<br>(9) Dyamnal;<br>(10) Kuppi | Kodekal Police Station |

By Order and in the Name of Governor of Karnataka,

**S. RAJU**

PR-449

Under Secretary to Government,
Home Department, (Police Expenditure).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಐ: 120 ಎಂಎಂಎನ್: 2003 ಬೆಂಗಳೂರು, ದಿನಾಂಕ: 13ನೇ ಜುಲೈ 2004**

ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ: 27.03.2004ರಲ್ಲಿ ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ಕುರುಡುಮಲೆ ಗ್ರಾಮದ ಶ್ರೀ ವಿನಾಯಕ ದೇವಸ್ಥಾನದ ಸುತ್ತ 1.50 ಕಿಮೀ. ವ್ಯಾಪ್ತಿಯ ಪ್ರದೇಶದಲ್ಲಿ ಯಾವುದೇ ಕಲ್ಲುಗಣಿಗಾರಿಕೆ ನಡೆಸುವುದನ್ನು ನಿಷೇಧಿಸುವಂತೆ ಕೋರಿದ್ದು, ಸದರಿ ಕೋರಿಕೆಯಂತೆ ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ಕುರುಡುಮಲೆ ಗ್ರಾಮದ ಶ್ರೀ ವಿನಾಯಕ ದೇವಸ್ಥಾನದ ಸುತ್ತ 1.50 ಕಿಮೀ ವ್ಯಾಪ್ತಿಯಲ್ಲಿ ಯಾವುದೇ ಕಲ್ಲುಗಣಿಗಾರಿಕೆ ನಡೆಸುವುದನ್ನು ಈ ಮೂಲಕ ನಿಷೇಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 441

**ವೈ. ಎನ್. ಬೀರಲಿಂಗೇಗೌಡ**

ಪೀಠಾಧಿಕಾರಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**WATER RESOURCES SECRETARIAT**

**NOTIFICATION**

**No.WRD 68 KBN 2003(P-1), dated: 22nd July 2004**

The draft of the following rules further to amend the Karnataka Irrigation rules 1965, which the Government of Karnataka proposes to make in exercise of the powers conferred by sub-section (1) of section 71 of the Karnataka Irrigation Act, 1965 2003 (Karnataka Act 16 of 1965) is here by published as required by sub section (1) of the said section for the information of persons likely to be affected thereby and notice is hereby given that the said draft will be taken into consideration after fifteen days from the date of its publication in the official Gazette.

Any objections or suggestions, which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Secretary to Government, Water Resources Department, 6th Floor, M.S. Building, Bangalore-01.

**Draft Rules**

1. **Title and commencement*:-***

(1) These rules may be called the Karnataka Irrigation (Amendment) rules 2004.

(2) They shall come into force on the date of their publication in the Official Gazette.

2. **Insertion of rule 16A*:-***

In the Karnataka Irrigation Rules, 1965 (hereinafter referred to as the said rules), after rule 16, the following shall be inserted, namely:-

**"16A Irrigation officer for purposes of section 27A:-** The superintending Engineer having jurisdiction over the area shall be the irrigation officers for the purpose of grant of prior permission for alienation of land under section 27A".

**3. Insertion of rule 17 C:-**

In the said rules after rule 17 B, the following shall be inserted, namely:-

"17 C Application for grant permission for alienation of land under section 27A:- Every application for grant of permission for alienation of land under sub-section(1) of section 27A shall be made in form 17".

**4. Insertion of new form 17:-** In the said rules after FORM 16, the following form shall be inserted, namely:-

**FORM-17**
**(See rule 17C)**

Application for permission for alienation of the land under Section 27A of the Karnataka Irrigation (Amendment) Act 2003.

To.

The Superintending Engineer,
……………………… Circle,
………………………
………………………
………………………

1) I ……………………… resident of ……………….. village ………….. taluka ………………… district make this application for permission to alienate the land which has been specified in the Notification as coming under the irrigation work …………………. Subject to the guidelines issued by the State Government from time to time and further subject to the provisions contained in the Act and Rules.

| Name of the Village | Survey No. | Total Area of Holding | Area to be Irrigated | Out of which area to be alienated | Purpose for which permission is required |
|---|---|---|---|---|---|
| 1 | 2 | 3 | 4 | 5 | 6 |
| | | | | | |

2) I am the owner of lands and it is necessary for me to alienate an extent of……………A-G for the following purpose.

a)
b)
c)

3) The name and address of the person to whom I am transferring my lands by way of sale/mortgage/lease/gift/exchange or otherwise is given as below:

| Name of the Transferee | Full Address, Village/Tq/ District State | Sl. No in the voters list | Purpose of seeking transfer of the land | Signature/ Thumb Impression of Transferee |
|---|---|---|---|---|
| 1 | 2 | 3 | 4 | 5 |
| | | | | |

Signature/Thumb Impression of left Hand of the Transferee.

Signature/Thumb Impression of left Hand of the Transferee.

Date:
Place:
Signature of the witness: (1)
(2)

By Order and in the name of the Governor of Karnataka,

PR-454

**I. D. DHAMAN**
Under Secretary to the Government (Tech),
Water Resources Department (KBJNL S.Cell).

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 27 ರಾಶಾಪು 2004, ಬೆಂಗಳೂರು, ದಿನಾಂಕ: 19ನೇ ಜುಲೈ 2004**

ಕರ್ನಾಟಕ ಉಚ್ಚ ನ್ಯಾಯಾಲಯ ಅಧಿನಿಯಮ, 1961 (1962ರ 15) ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್‌ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಆದೇಶಿಸಲಾಗಿದೆ.

### ಕರ್ನಾಟಕ ಉಚ್ಚ ನ್ಯಾಯಾಲಯ ಅಧಿನಿಯಮ, 1961

### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು**



## ಉದ್ದೇಶ ಮತ್ತು ಕಾರಣಗಳ ಹೇಳಿಕೆ

### I

**1962ರ ಅಧಿನಿಯಮ 5:–** ರಾಜ್ಯಗಳ ಪುನರ್ ವಿಂಗಡಣೆ ಅಧಿನಿಯಮ, 1956ರ 50ನೇ ಪ್ರಕರಣದ ಮೂಲಕ ಹಿಂದಿನ ಮೈಸೂರು ರಾಜ್ಯದ ಉಚ್ಚ ನ್ಯಾಯಾಲಯವನ್ನು ರದ್ದುಗೊಳಿಸಿ, ಹೊಸ ರಾಜ್ಯಕ್ಕೆ ಒಂದು ಹೊಸ ಉಚ್ಚ ನ್ಯಾಯಾಲಯ ಸ್ಥಾಪನೆ ಮಾಡಿದ ಪರಿಣಾಮವಾಗಿ ಆ ಅಧಿನಿಯಮದ 52, 54 ಮತ್ತು 57ನೇ ಪ್ರಕರಣಗಳು ಹೊಸ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿ, ಪದ್ಧತಿ ಮತ್ತು ಕಾರ್ಯ ವಿಧಾನ ಮತ್ತು ನ್ಯಾಯಾಧೀಶರ ಅಧಿಕಾರಗಳನ್ನು ನಿಯಮಿಸುತ್ತವೆ. ಉಚ್ಚ ನ್ಯಾಯಾಲಯವು 52ನೇ ಪ್ರಕರಣದ ಮೇರೆಗೆ, ರಾಜ್ಯದ ವಿವಿಧ ಪ್ರದೇಶಗಳಿಗೆ ಸಂಬಂಧಿಸಿದಂತೆ, 1956ರ ನವೆಂಬರ್, 1ನೇ ದಿನಾಂಕಕ್ಕೆ ಮೊದಲು ಜಾರಿಯಲ್ಲಿದ್ದ ಕಾನೂನಿನ ಅಡಿಯಲ್ಲಿ ಮುಂಬಯಿ,

ಹೈದರಾಬಾದ್, ಮದ್ರಾಸ್ ಮತ್ತು ಮೈಸೂರು - ಈ ಉಚ್ಚ ನ್ಯಾಯಾಲಯಗಳು ಸಂಬಂಧಪಟ್ಟ ಪ್ರದೇಶಗಳಲ್ಲಿ ಹೊಂದಿದ್ದಂಥ ಮೂಲ ಅಪೀಲು ಅಥವಾ ಇತರ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತದೆ. 54ನೇ ಪ್ರಕರಣದ ಆಧಾರದ ಮೇಲೆ, ಮೈಸೂರು ಉಚ್ಚ ನ್ಯಾಯಾಲಯ ಅಧಿನಿಯಮ, 1884ರ ಉಪಬಂಧಗಳು, ಹೊಸ ರಾಜ್ಯದ ಉಚ್ಚ ನ್ಯಾಯಾಲಯಕ್ಕೆ ಸಂಬಂಧಿಸಿದಂತೆ ಪದ್ಧತಿ ಮತ್ತು ಕಾರ್ಯ ವಿಧಾನದ ಸಂಬಂಧದಲ್ಲಿ ಅನ್ವಯವಾಗುತ್ತವೆ ಮತ್ತು 57ನೇ ಪ್ರಕರಣದ ಆಧಾರದ ಮೇಲೆ, ಸದರಿ ಅಧಿನಿಯಮದ ಉಪಬಂಧಗಳು, ಮುಖ್ಯ ನ್ಯಾಯಾಧೀಶರ, ಏಕ ನ್ಯಾಯಾಧೀಶರ ಮತ್ತು ವಿಭಾಗೀಯ ನ್ಯಾಯಾಲಯಗಳ ಅಧಿಕಾರಗಳು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸುವಲ್ಲಿ ಸಹಾಯಕ ವಿಷಯಗಳ ಸಂಬಂಧದಲ್ಲಿ ಅನ್ವಯವಾಗುತ್ತವೆ. ರಾಜ್ಯಗಳ ಪುನರ್ ವಿಂಗಡಣೆ ಅಧಿನಿಯಮದ 69ನೇ ಪ್ರಕರಣದ ಮೇರೆಗೆ, ಮೇಲೆ ಹೇಳಲಾದ ಉಪಬಂಧಗಳು, ಯಾವುದೇ ವಿಧಾನಮಂಡಲವು ಅಥವಾ ಅಂಥ ಉಪಬಂಧವನ್ನು ಮಾಡುವುದಕ್ಕೆ ಅಧಿಕಾರ ಹೊಂದಿರುವ ಇತರ ಪ್ರಾಧಿಕಾರವು ಉಚ್ಚ ನ್ಯಾಯಾಲಯದ ಸಂಬಂಧದಲ್ಲಿ ಮಾಡಬಹುದಾದ ಯಾವುದೇ ಉಪಬಂಧಕ್ಕೊಳಪಟ್ಟು ಪರಿಣಾಮಕಾರಿಯಾಗತಕ್ಕದ್ದು.

ರಾಜ್ಯ ಉಚ್ಚ ನ್ಯಾಯಾಲಯವು ಇಡೀ ಹೊಸ ರಾಜ್ಯಕ್ಕೆ ಸಂಬಂಧಿಸಿದಂತೆ ಅಂಥವೇ ಅಧಿಕಾರಗಳು ಮತ್ತು ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಲು ಸಾಧ್ಯವಾಗುವಂತೆ ರಾಜ್ಯ ವಿಧಾನ ಮಂಡಲವು ಒಂದು ಕಾನೂನನ್ನು ಅಧಿನಿಯಮಿಸಬೇಕೆಂದು ಭಾರತ ಸರ್ಕಾರವು ಸಲಹೆ ಮಾಡಿದೆ. ಅಂತೆಯೇ, ಉಚ್ಚ ನ್ಯಾಯಾಲಯದೊಂದಿಗೆ ಸಮಾಲೋಚನೆ ನಡೆಸಿ ಈ ವಿಧೇಯಕವನ್ನು ಸಿದ್ಧಪಡಿಸಲಾಗಿದೆ. ಕಾನೂನು ಆಯೋಗದ ಶಿಫಾರಸ್ಸುಗಳನ್ನು ಸಹ ಪರಿಗಣಿಸಲಾಗಿದೆ.

ಏಕ ಸದಸ್ಯ ನ್ಯಾಯ ಪೀಠ ಮತ್ತು ಇಬ್ಬರು ಸದಸ್ಯರ ನ್ಯಾಯ ಪೀಠವು ವಿಚಾರಣೆ ಮಾಡಬೇಕಾದ ಪ್ರಕರಣಗಳನ್ನು ನಿರ್ದಿಷ್ಟಪಡಿಸಿ ವಿಧೇಯಕದಲ್ಲಿ ಉಪಬಂಧ ಕಲ್ಪಿಸಲಾಗಿದೆ. ಮೂಲ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಏಕ ಸದಸ್ಯ ನ್ಯಾಯ ಪೀಠವು ನೀಡುವ ತೀರ್ಪುಗಳ ಸಂಬಂಧದಲ್ಲಿ ಇಬ್ಬರು ಸದಸ್ಯರಿರುವ ನ್ಯಾಯ ಪೀಠಕ್ಕೆ ಅಪೀಲು ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ. ಪ್ರಸ್ತುತ, ಎಲ್ಲಾ ಕ್ರಿಮಿನಲ್ ಅಪೀಲುಗಳನ್ನು ಇಬ್ಬರು ಸದಸ್ಯರುಳ್ಳ ನ್ಯಾಯಪೀಠವು ವಿಚಾರಣೆ ನಡೆಸುತ್ತಿದೆ, ಮತ್ತು ಇದರಿಂದ, ಅಂಥ ಅಪೀಲುಗಳನ್ನು ಇತ್ಯರ್ಥಪಡಿಸುವಲ್ಲಿ ಬಹಳಷ್ಟು ವಿಳಂಬ ಉಂಟಾಗುತ್ತಿದೆ. ಆದುದರಿಂದ, ಏಕ ನ್ಯಾಯ ಪೀಠದಿಂದ ವಿಚಾರಣೆ ನಡೆದು, ಯಾರೇ ಆಪಾದಿತನ ವಿರುದ್ಧ ಮರಣ ದಂಡನೆಯ ಶಿಕ್ಷೆ, ಜೀವಾವಧಿ ಶಿಕ್ಷೆ ಅಥವಾ ಏಳು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸ ಶಿಕ್ಷೆ ವಿಧಿಸದಿರುವಂಥ ತೀರ್ಪುಗಳ ವಿರುದ್ಧ ಕ್ರಿಮಿನಲ್ ಅಪೀಲುಗಳನ್ನು ಸಲ್ಲಿಸುವುದಕ್ಕೆ, 5ನೇ ಖಂಡದಲ್ಲಿ ಉಪಬಂಧ ಕಲ್ಪಿಸಲಾಗಿದೆ. 6ನೇ ಖಂಡದ ಆಧಾರದ ಮೇಲಿನ ಎಲ್ಲಾ ಅಪೀಲುಗಳನ್ನು ಏಕ ಸದಸ್ಯ ನ್ಯಾಯಪೀಠವು ವಿಚಾರಣೆ ನಡೆಸುವುದು. ದೀರ್ಘ ರಜಾ ಅವಧಿಯಲ್ಲಿ ಉಚ್ಚ ನ್ಯಾಯಾಲಯದ ತುರ್ತು ಕೆಲಸದ ವಿಲೇವಾರಿಗೆ ಸಂಬಂಧಿಸಿದಂತೆ ನಿರ್ದಿಷ್ಟ ಉಪಬಂಧ ಕಲ್ಪಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ. 12ನೇ ಖಂಡವು ಇದಕ್ಕೆ ಉಪಬಂಧ ಕಲ್ಪಿಸುತ್ತದೆ.

(ಕಡತ ಸಂಖ್ಯೆ.ಲಾ 126 ಎಲ್‌ಜಿಎನ್ 58 ಇದರಿಂದ ಪಡೆಯಲಾಗಿದೆ).

## II

**1969ರ ತಿದ್ದುಪಡಿ ಮಾಡುವ ಅಧಿನಿಯಮ 20:–** ಮೈಸೂರು ಉಚ್ಚ ನ್ಯಾಯಾಲಯ ಅಧಿನಿಯಮ, 1961ರ 3ನೇ ಪ್ರಕರಣವು, ಉಚ್ಚ ನ್ಯಾಯಾಲಯವು ಒಬ್ಬ ರಿಜಿಸ್ಟ್ರಾರನನ್ನು ಮತ್ತು ಉಚ್ಚ ನ್ಯಾಯಾಲಯದೊಂದಿಗೆ ಸಮಾಲೋಚಿಸಿ ಸರ್ಕಾರವು ನಿರ್ದಿಷ್ಟಪಡಿಸಬಹುದಾದಷ್ಟು ಜನ ಉಪ-ರಿಜಿಸ್ಟ್ರಾರರುಗಳನ್ನು ಹೊಂದುವುದಕ್ಕೆ ಅವಕಾಶ ಮಾಡಿಕೊಡುತ್ತದೆ. ಉಚ್ಚ ನ್ಯಾಯಾಲಯವು, ಹೆಚ್ಚುವರಿ ರಿಜಿಸ್ಟ್ರಾರ್, ಜಂಟಿ ರಿಜಿಸ್ಟ್ರಾರ ಮತ್ತು ಸಹಾಯಕ ರಿಜಿಸ್ಟ್ರಾರರುಗಳನ್ನು ನೇಮಕ ಮಾಡಿಕೊಳ್ಳಲು ಉಪಬಂಧ ಕಲ್ಪಿಸಬೇಕೆಂದು ಶಿಫಾರಸು ಮಾಡಿದೆ. ಈ ಅಧಿಕಾರಿಗಳು, ಉಚ್ಚ ನ್ಯಾಯಾಲಯದ ನಿಯಮಗಳ ಮೇರೆಗೆ, ಮಾನ್ಯ ಮುಖ್ಯ ನ್ಯಾಯಾಧೀಶರು ಅವರಿಗೆ ವಹಿಸಿಕೊಡಬಹುದಾದ ಶಾಸನಬದ್ಧ ಪ್ರಕಾರ್ಯಗಳನ್ನು ಚಲಾಯಿಸಬೇಕಾಗಿರುವುದರಿಂದ ಅಧಿನಿಯಮವನ್ನು ಯುಕ್ತವಾಗಿ ತಿದ್ದುಪಡಿ ಮಾಡುವುದು ಅಗತ್ಯವಾಗಿದೆ.

ಆದುದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ 23ನೇ ಆಗಸ್ಟ್, 1969ರಲ್ಲಿ ಸಂಖ್ಯೆ.41ರ ಪುಟ ಸಂಖ್ಯೆ 3ರಲ್ಲಿ ಪ್ರಕಟಿಸಲಾಗಿದೆ).

## III

**1973ರ ತಿದ್ದುಪಡಿ ಮಾಡುವ ಅಧಿನಿಯಮ 12:–** ಪ್ರಸ್ತುತ, ಭಾರತ ಸಂವಿಧಾನದ 226ನೇ ಅನುಚ್ಛೇದದ (1)ನೇ ಖಂಡ ಮತ್ತು 227ನೇ ಮತ್ತು 228ನೇ ಅನುಚ್ಛೇದಗಳ ಮೇರೆಗಿನ ಎಲ್ಲಾ ಅರ್ಜಿಗಳನ್ನು ಇಬ್ಬರು ನ್ಯಾಯಾಧೀಶರನ್ನು ಒಳಗೊಂಡ ನ್ಯಾಯಪೀಠವು ವ್ಯವಹರಿಸುತ್ತಿದೆ. ಕೇರಳ, ಮದ್ರಾಸು, ನಾಗಪುರ, ಅಲಹಾಬಾದ್, ದೆಹಲಿ, ಆಂಧ್ರ ಪ್ರದೇಶ ಮತ್ತು ಮುಂಬಯಿ ಉಚ್ಚ ನ್ಯಾಯಾಲಯಗಳಲ್ಲಿ ಅಂಥ ಅರ್ಜಿಗಳನ್ನು ಏಕ ಸದಸ್ಯ ನ್ಯಾಯ ಪೀಠವು ವ್ಯವಹರಿಸುತ್ತದೆ ಮತ್ತು ಅಪೀಲಿನ ಹಕ್ಕನ್ನು, ಬಾಧಿತನಾದ ಪಕ್ಷಕಾರನಿಗೆ ನೀಡಲಾಗಿದೆ ಮತ್ತು ಅಂಥ ಅಪೀಲುಗಳನ್ನು ಇಬ್ಬರು ನ್ಯಾಯಾಧೀಶರನ್ನು ಒಳಗೊಂಡ ನ್ಯಾಯ ಪೀಠವು ವ್ಯವಹರಿಸುತ್ತದೆ. ಇದಲ್ಲದೆ, 1957 ಮತ್ತು 1960 ರಲ್ಲಿ

ನಡೆದ ಕಾನೂನು ಸಚಿವರ ಸಮ್ಮೇಳನವು, ಅಂಥ ಅರ್ಜಿಗಳನ್ನು, ಏಕ ಸದಸ್ಯ ನ್ಯಾಯಪೀಠವು ವ್ಯವಹರಿಸಬೇಕೆಂದು ಮತ್ತು ಇಬ್ಬರು ನ್ಯಾಯಾಧೀಶರನ್ನು ಒಳಗೊಂಡ ನ್ಯಾಯಪೀಠಕ್ಕೆ ಅಪೀಲು ಸಲ್ಲಿಸಲು ಪಕ್ಷಕಾರರಿಗೆ ಹಕ್ಕು ನೀಡಬೇಕೆಂದು ಅಭಿಪ್ರಾಯಪಟ್ಟಿತ್ತು. ಕಾನೂನು ಆಯೋಗವು, ತನ್ನ ಹದಿನಾಲ್ಕನೇ ವರದಿಯ ಸಂಪುಟ IIರಲ್ಲಿ ಈ ವಿಷಯವನ್ನು ಪರಿಶೀಲಿಸುವಾಗ ನಿರ್ದಿಷ್ಟವಾಗಿ ಮದ್ರಾಸನ್ನು ಉಲ್ಲೇಖಿಸುವುದರೊಂದಿಗೆ ಅಂಥ ಪ್ರಕ್ರಿಯೆಯು ತೃಪ್ತಿಕರ ಫಲಿತಾಂಶವನ್ನು ನೀಡಿದೆ ಎಂದು ತಿಳಿಸಿದೆ. ರಿಟ್ ಅರ್ಜಿಗಳ ಮತ್ತು ಸಂಬಂಧಪಟ್ಟ ವಿಷಯಗಳ ವಿಲೇವಾರಿಯನ್ನು ನಿಯಮಿಸುವ ತತ್ತ್ವಗಳ ಬಗ್ಗೆ ವಿವಿಧ ಉಚ್ಚ ನ್ಯಾಯಾಲಯಗಳ ಮತ್ತು ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳಿಂದ ಈಗ ಸಾಕಷ್ಟು ಸ್ಪಷ್ಟೀಕರಣ ದೊರೆತಿರುವುದರಿಂದ, ಇಬ್ಬರು ನ್ಯಾಯಾಧೀಶರನ್ನು ಒಳಗೊಂಡ ಪೀಠಕ್ಕೆ ಅಪೀಲು ಸಲ್ಲಿಸಲು ಪಕ್ಷಕಾರರಿಗೆ ಹಕ್ಕು ಕೊಡುವುದರೊಂದಿಗೆ ಭಾರತ ಸಂವಿಧಾನದ 226ನೇ ಅನುಚ್ಛೇದದ (1)ನೇ ಖಂಡದ ಮೇರೆಗಿನ ಅರ್ಜಿಗಳನ್ನು (ಹೇಬಿಯಸ್ ಕಾರ್ಪಸ್ ಸ್ವರೂಪದ ರಿಟ್‌ನಲ್ಲಿ ಆದೇಶ ನೀಡಬೇಕೆಂಬ ಕೋರಿಕೆ ಹೊರತುಪಡಿಸಿ) ಮತ್ತು ಸಂವಿಧಾನದ 227 ಮತ್ತು 228 ಈ ಅನುಚ್ಛೇದಗಳ ಮೇರೆಗಿನ ಅರ್ಜಿಗಳ ಬಗ್ಗೆ ವ್ಯವಹರಿಸುವುದಕ್ಕೆ ಏಕ ಸದಸ್ಯ ನ್ಯಾಯ ಪೀಠಕ್ಕೆ ಅಧಿಕಾರವನ್ನು ಕೊಡುವುದು ಯುಕ್ತವೆಂದು ಪರಿಗಣಿಸಲಾಗಿದೆ. ಈ ಪ್ರಕ್ರಿಯೆಯು, ಅಂಥ ಅರ್ಜಿಗಳ ಇನ್ನಷ್ಟು ಕ್ಷಿಪ್ರ ವಿಲೇವಾರಿಗೆ ಅನುಕೂಲವಾಗಬಹುದೆಂದು ಮತ್ತು ಸಂವಿಧಾನದ (ಮೂವತ್ತನೇ) ತಿದ್ದುಪಡಿಯ ಕಾರಣದಿಂದಾಗಿ ಸರ್ವೋಚ್ಚ ನ್ಯಾಯಾಲಯದ ಮೊರೆ ಹೋಗಲು ಯಾರ ಹಕ್ಕು ಸಾಕಷ್ಟು ನಿರ್ಬಂಧಿತಗೊಂಡಿರುವುದೋ ಅಂಥ ಬಾಧಿತನಾದ ಪಕ್ಷಕಾರನಿಗೆ ಒಂದು ಅಪೀಲಿನ ಹಕ್ಕನ್ನು ಕೂಡ ಒದಗಿಸಬಹುದೆಂದು ಪರಿಗಣಿಸಲಾಗಿದೆ.

ಆದುದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ ದಿನಾಂಕ 2ನೇ ಮೇ, 1973 ರಲ್ಲಿ ಕ್ರಮಸಂಖ್ಯೆ 432ರ ಪುಟ 4 ರಲ್ಲಿ ಪ್ರಕಟವಾಗಿದೆ).

## IV

**1980ರ ತಿದ್ದುಪಡಿ ಮಾಡುವ ಅಧಿನಿಯಮ 13:-** ನಗರ ಸಿವಿಲ್ ನ್ಯಾಯಾಲಯಗಳು ಮುಂಬಯಿ, ಮದ್ರಾಸು, ಕಲ್ಕತ್ತ, ಹೈದ್ರಾಬಾದು ಮತ್ತು ಅಹ್ಮದಾಬಾದ್ ಮಹಾ ನಗರಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಮೇಲೆ ಹೆಸರಿಸಲಾದ ಇತರ ನಗರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ನಗರ ಸಿವಿಲ್ ನ್ಯಾಯಾಲಯಗಳ ಮಾದರಿಯಲ್ಲಿ ಒಂದು ನಗರ ಸಿವಿಲ್ ನ್ಯಾಯಾಲಯವನ್ನು ಬೆಂಗಳೂರು ನಗರದಲ್ಲಿ ಸಹ ರಚಿಸಬಹುದೆಂದು ಉಚ್ಚ ನ್ಯಾಯಾಲಯವು ಅಭಿಪ್ರಾಯಪಟ್ಟಿದೆ. ಅಂಥ ಒಂದು ನಗರ ಸಿವಿಲ್ ನ್ಯಾಯಾಲಯವನ್ನು ರಚಿಸಿದಾಗ ಸೆಷನ್ಸ್ ನ್ಯಾಯಾಧೀಶನು, ಅನನ್ಯವಾಗಿ ಕ್ರಿಮಿನಲ್ ಮೊಕದ್ದಮೆಗಳ ಸಂಬಂಧದ ಕಾರ್ಯಗಳ ಬಗ್ಗೆ ವ್ಯವಹರಿಸುತ್ತಾನೆ ಮತ್ತು ಮ್ಯಾಜಿಸ್ಟ್ರೇಟರುಗಳ ನ್ಯಾಯಾಲಯಗಳ ಕೆಲಸ ಕಾರ್ಯಗಳ ಮೇಲ್ವಿಚಾರಣೆ ನಡೆಸುತ್ತಾನೆ. ನಗರ ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯಕ್ಕೆ ಮಾತ್ರ ಅಪೀಲು ಮಾಡಿಕೊಳ್ಳಲು ಅವಕಾಶವಿರುವುದರಿಂದ, ಇದು, ಪ್ರಕರಣಗಳನ್ನು ವಿಲೆ ಮಾಡುವಲ್ಲಿನ ವಿಳಂಬವನ್ನು ಕಡಿಮೆ ಗೊಳಿಸುವುದಲ್ಲದೆ, ವ್ಯಾಜ್ಯದ ವೆಚ್ಚವನ್ನು ಕೂಡ ತಗ್ಗಿಸುತ್ತದೆ.

ಆದುದರಿಂದ, ಸರ್ಕಾರವು, ಬೆಂಗಳೂರು ನಗರಕ್ಕೆ ಒಂದು ನಗರ ಸಿವಿಲ್ ನ್ಯಾಯಾಲಯವನ್ನು ರಚಿಸುವುದು ಅವಶ್ಯವೆಂದು ಪರಿಗಣಿಸಿದೆ. ಸಿವಿಲ್ ನ್ಯಾಯಾಲಯಗಳಲ್ಲಿ ದೀರ್ಘ ರಜೆಯನ್ನು ರದ್ದುಗೊಳಿಸಲು ಸಹ ಪ್ರಸ್ತಾವಿಸಿದೆ.

ಆದುದರಿಂದ ಈ ವಿಧೇಯಕ.

**ಟಿಪ್ಪಣಿ:-** ಈ ಅಧಿನಿಯಮದ ಮೂಲಕ, ನಗರ ಸಿವಿಲ್ ನ್ಯಾಯಾಲಯದ ಸ್ಥಾಪನೆಯ ಪರಿಣಾಮವಾಗಿ 1962ರ ಅಧಿನಿಯಮ 5ಕ್ಕೆ ಕೆಲವೊಂದು ತಿದ್ದುಪಡಿಗಳನ್ನು ಮಾಡಲಾಗಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ ದಿನಾಂಕ 16ನೇ ಮೇ, 1979ರಲ್ಲಿ ಸಂಖ್ಯೆ. 473ರ ಪುಟ 14 ರಲ್ಲಿ ಪ್ರಕಟವಾಗಿದೆ).

## V

**1994ರ ತಿದ್ದುಪಡಿ ಮಾಡುವ ಅಧಿನಿಯಮ 6:-** ಉಚ್ಚ ನ್ಯಾಯಾಲಯದ ಬಾಕಿ ಉಳಿದಿರುವ ವ್ಯಾಜ್ಯಗಳ ಸಮಿತಿಯ ಸಲಹೆಗಳ ಮೇಲೆ, ಕರ್ನಾಟಕ ಉಚ್ಚ ನ್ಯಾಯಾಲಯವು, ಕಡಿಮೆ ವೆಚ್ಚದಲ್ಲಿ ಪ್ರಕರಣಗಳ ತ್ವರಿತ ವಿಲೆಗೆ ಅನುಕೂಲವಾಗುವಂತೆ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿನಿಯಮದ 5ನೇ ಪ್ರಕರಣದ ತಿದ್ದುಪಡಿಗೆ ಶಿಫಾರಸು ಮಾಡಿದೆ.

ಆದುದರಿಂದ ಈ ವಿಧೇಯಕ.

(ಕಡತ ಸಂಖ್ಯೆ.ಲಾ 47 ಎಲ್‌ಜಿಎನ್ 93 ಇದರಿಂದ ಪಡೆಯಲಾಗಿದೆ).

## 1962ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 5

(ಇದು 1962ರ ಫೆಬ್ರವರಿ ಮೊದಲ ದಿನದಂದು [1][ಕರ್ನಾಟಕ ರಾಜ್ಯಪತ್ರ][1]ದಲ್ಲಿ ಮೊದಲು ಪ್ರಕಟವಾಗಿದೆ.)

## [1][ಕರ್ನಾಟಕ][1] ಉಚ್ಚ ನ್ಯಾಯಾಲಯ ಅಧಿನಿಯಮ, 1961

(ಇದು 1961ರ ಡಿಸೆಂಬರ್ ಇಪ್ಪತ್ತೈದರಂದು ರಾಷ್ಟ್ರಪತಿಗಳ ಅನುಮೋದನೆ ಪಡೆದಿದೆ.)

(ಇದು 1969ರ 20, 1973ರ 12, 1980ರ 13 ಮತ್ತು 1994ರ 6ನೇ ಕರ್ನಾಟಕ ಅಧಿನಿಯಮಗಳಿಂದ ತಿದ್ದುಪಡಿಯಾಗಿದೆ.)

ನ್ಯಾಯಾಡಳಿತ ನಿರ್ವಹಣೆಗೆ ಸಂಬಂಧಿಸಿದಂತೆ [1][ಕರ್ನಾಟಕ ರಾಜ್ಯ][1]ದ ಉಚ್ಚ ನ್ಯಾಯಾಲಯದ ಕಾರ್ಯಕಲಾಪಗಳನ್ನು ಮತ್ತು ಅಧಿಕಾರಗಳ ಚಲಾವಣೆಯನ್ನು ವಿನಿಯಮಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಮತ್ತು ಅದರ ಅಧಿಕಾರ ವ್ಯಾಪ್ತಿಯ ಬಗ್ಗೆ ಉಪಬಂಧ ಕಲ್ಪಿಸಲು ಅಧಿನಿಯಮ.

ನ್ಯಾಯಾಡಳಿತ ನಿರ್ವಹಣೆಗೆ ಸಂಬಂಧಿಸಿದಂತೆ [1][ಕರ್ನಾಟಕ ರಾಜ್ಯ][1]ದ ಉಚ್ಚ ನ್ಯಾಯಾಲಯದ ಕಾರ್ಯಕಲಾಪಗಳನ್ನು ಮತ್ತು ಅಧಿಕಾರಗಳ ಚಲಾವಣೆಯನ್ನು ವಿನಿಯಮಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಮತ್ತು ಅದರ ಅಧಿಕಾರ ವ್ಯಾಪ್ತಿ ಮತ್ತು ಇದರಲ್ಲಿ ಇನ್ನು ಮುಂದೆ ಕಾಣಿಸಲಾದ ಇತರ ವಿಷಯಗಳ ಬಗ್ಗೆ ಉಪಬಂಧಿಸುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹನ್ನೆರಡನೆಯ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕುದು:

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಉಚ್ಚ ನ್ಯಾಯಾಲಯದ ಅಧಿನಿಯಮ, 1961 ಎಂದು ಕರೆಯತಕ್ಕುದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕುದು.

**2. ಪರಿಭಾಷೆಗಳು:** ಈ ಅಧಿನಿಯಮದಲ್ಲಿ,-

(1) "ಮುಖ್ಯ ನ್ಯಾಯಾಧೀಶ" ಎಂದರೆ, [1][ಕರ್ನಾಟಕ ರಾಜ್ಯ][1]ದ ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶ;

(2) "ಕ್ರಿಮಿನಲ್ ಅಪೀಲು" ಎಂದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ, ಕೆಳಗಿನ ಹಂತದ ಕ್ರಿಮಿನಲ್ ನ್ಯಾಯಾಲಯವು ತನ್ನ ಮೂಲ ಕ್ರಿಮಿನಲ್ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಹೊರಡಿಸಿದ ಆದೇಶ ಅಥವಾ ಶಿಕ್ಷೆಯ ಮೇಲೆ ಉಚ್ಚನ್ಯಾಯಾಲಯಕ್ಕೆ ಅಪೀಲು ಹೋಗಲು ಅವಕಾಶವಿರುವ ಅಪೀಲು;

(3) "ಮೊದಲನೆಯ ಅಪೀಲು" ಎಂದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ, ಯಾವುದೇ ಕೆಳಗಿನ ಹಂತದ ಸಿವಿಲ್ ನ್ಯಾಯಾಲಯವು ತನ್ನ ಮೂಲ ಸಿವಿಲ್ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಹೊರಡಿಸಿದ ತೀರ್ಪು, ಡಿಕ್ರಿ ಅಥವಾ ಆದೇಶದ ಮೇಲೆ ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಲಾಗುವ ಅಪೀಲು;

(4) "ಪೂರ್ಣ ಪೀಠ" ಎಂದರೆ, ಉಚ್ಚ ನ್ಯಾಯಾಲಯದ ಮೂವರು ನ್ಯಾಯಾಧೀಶರುಗಳಿಗಿಂತ ಕಡಿಮೆಯಲ್ಲದ ಸಂಖ್ಯೆಯ ನ್ಯಾಯಾಧೀಶರನ್ನೊಳಗೊಂಡ ಪೀಠ;

(5) "ಉಚ್ಚ ನ್ಯಾಯಾಲಯ" ಎಂದರೆ, [1][ಕರ್ನಾಟಕ ರಾಜ್ಯ][1]ದ ಉಚ್ಚನ್ಯಾಯಾಲಯ;

(6) "ಎರಡನೆಯ ಅಪೀಲು" ಎಂದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ, ಕೆಳಗಿನ ಹಂತದ ಯಾವುದೇ ಸಿವಿಲ್ ನ್ಯಾಯಾಲಯವು ತನ್ನ ಅಪೀಲು ಸಿವಿಲ್ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಹೊರಡಿಸಿದ ತೀರ್ಪು, ಡಿಕ್ರಿ ಅಥವಾ ಆದೇಶದ ಮೇಲೆ ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಲಾಗುವ ಅಪೀಲು.

**3. ರಿಜಿಸ್ಟ್ರಾರ್ ಮತ್ತು ಡೆಪ್ಯುಟಿ ರಿಜಿಸ್ಟ್ರಾರ್‌ಗಳು:** [2][(1)][2] ಉಚ್ಚನ್ಯಾಯಾಲಯವು, ಒಬ್ಬ ರಿಜಿಸ್ಟ್ರಾರನ್ನು ಮತ್ತು ರಾಜ್ಯಪಾಲರು ಉಚ್ಚ ನ್ಯಾಯಾಲಯದೊಂದಿಗೆ ಸಮಾಲೋಚಿಸಿ ನಿರ್ಧರಿಸಬಹುದಾದಷ್ಟು ಸಂಖ್ಯೆಯ ಡೆಪ್ಯುಟಿ ರಿಜಿಸ್ಟ್ರಾರನ್ನು ಹೊಂದಿರತಕ್ಕುದು.

[2][(2) ಉಚ್ಚ ನ್ಯಾಯಾಲಯವು, ರಾಜ್ಯಪಾಲರು ಉಚ್ಚ ನ್ಯಾಯಾಲಯದೊಡನೆ ಸಮಾಲೋಚಿಸಿ ನಿರ್ಧರಿಸಬಹುದಾದಷ್ಟು ಸಂಖ್ಯೆಯ ಅಡಿಷನಲ್ ರಿಜಿಸ್ಟ್ರಾರ್, ಜಂಟಿ ರಿಜಿಸ್ಟ್ರಾರ್ ಮತ್ತು ಸಹಾಯಕ ರಿಜಿಸ್ಟ್ರಾರರನ್ನು ಸಹ ಹೊಂದಿರತಕ್ಕುದು.][2]

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1969ರ ಅಧಿನಿಯಮ ಸಂಖ್ಯೆ 20ರ ಮೂಲಕ 19.9.1969 ರಿಂದ ಜಾರಿಗೆ ಬರುವಂತೆ 3ನೇ ಪ್ರಕರಣಕ್ಕೆ (1)ನೇ ಉಪಪ್ರಕರಣವೆಂದು ಪುನರ್ ಸಂಖ್ಯೆ ನೀಡಲಾಗಿದೆ ಮತ್ತು (2)ನೇ ಉಪ ಪ್ರಕರಣವನ್ನು ಹೊಸದಾಗಿ ಸೇರಿಸಲಾಗಿದೆ.

**4. ಉಚ್ಚ ನ್ಯಾಯಾಲಯದ ಏಕ ನ್ಯಾಯಾಧೀಶ ಪೀಠದ ತೀರ್ಮಾನಗಳ ಮೇಲೆ ಅಪೀಲುಗಳು:-** ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ಉಚ್ಚ ನ್ಯಾಯಾಲಯದ ಮೂಲ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಏಕ ಸದಸ್ಯ ನ್ಯಾಯಧೀಶ ಪೀಠವು ಹೊರಡಿಸಿದ ತೀರ್ಪು, ಡಿಕ್ರಿ, ಆದೇಶ ಅಥವಾ ಶಿಕ್ಷೆಯ ವಿರುದ್ಧ ಅಪೀಲನ್ನು ಉಚ್ಚ ನ್ಯಾಯಾಲಯದ ಇಬ್ಬರು ಇತರ ನ್ಯಾಯಾಧೀಶರನ್ನೊಳಗೊಂಡ ಪೀಠಕ್ಕೆ ಸಲ್ಲಿಸತಕ್ಕುದು ಮತ್ತು ಅದು ಅದರ ವಿಚಾರಣೆ ನಡೆಸತಕ್ಕುದು.

[1][**5. ಮೊದಲನೆಯ ಅಪೀಲುಗಳು:-** ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಹೊರತುಪಡಿಸಿ,-

(i) ಮೂರು ಲಕ್ಷ ರೂಪಾಯಿಗಳು ಅಥವಾ ಅದಕ್ಕೂ ಹೆಚ್ಚಿನ ಮೌಲ್ಯದ ವಿಷಯದ ಸಂಬಂಧದಲ್ಲಿನ ದಾವೆ ಅಥವಾ ಇತರ ವ್ಯವಹರಣೆಗಳಲ್ಲಿ ಹೊರಡಿಸಲಾದ ಡಿಕ್ರಿ ಅಥವಾ ಆದೇಶದ ವಿರುದ್ಧದ ಎಲ್ಲಾ ಮೊದಲನೆಯ ಅಪೀಲುಗಳನ್ನು ಉಚ್ಚ ನ್ಯಾಯಾಲಯದ ಇಬ್ಬರಿಗಿಂತ ಕಡಿಮೆ ಇಲ್ಲದ ನ್ಯಾಯಾಧೀಶರುಗಳನ್ನು ಒಳಗೊಂಡ ನ್ಯಾಯಪೀಠವು ವಿಚಾರಣೆ ನಡೆಸತಕ್ಕುದು ಮತ್ತು ಮೊದಲನೆಯ ಅಪೀಲುಗಳನ್ನು ಉಚ್ಚ ನ್ಯಾಯಾಲಯದ ಏಕ ನ್ಯಾಯಾಧೀಶ ಪೀಠವು ವಿಚಾರಣೆ ನಡೆಸತಕ್ಕುದು.

(ii) ಮರಣದಂಡನೆ ಅಥವಾ ಕಾರಾವಾಸದ ಶಿಕ್ಷೆ ನೀಡಿದ ತೀರ್ಪುಗಳ ವಿರುದ್ಧ ಮತ್ತು ಮರಣ ದಂಡನೆ ಅಥವಾ ಆಜೀವ ಕಾರಾವಾಸದಿಂದ ಶಿಕ್ಷಿಸಬಹುದಾದ ಅಪರಾಧಗಳ ಮೊಕದ್ದಮೆಗಳಲ್ಲಿ ಖುಲಾಸೆ ಮಾಡಿರುವ ತೀರ್ಪುಗಳ ವಿರುದ್ಧದ ಎಲ್ಲ ಕ್ರಿಮಿನಲ್ ಅಪೀಲುಗಳನ್ನು ಉಚ್ಚ ನ್ಯಾಯಾಲಯದ ಇಬ್ಬರು ನ್ಯಾಯಾಧೀಶರಿಗಿಂತ ಕಡಿಮೆಯಿಲ್ಲದ ನ್ಯಾಯಾಧೀಶರನ್ನು ಒಳಗೊಂಡ ಒಂದು ನ್ಯಾಯಪೀಠವು ವಿಚಾರಣೆ ನಡೆಸತಕ್ಕುದು ಮತ್ತು ಇತರ ಕ್ರಿಮಿನಲ್ ಅಪೀಲುಗಳನ್ನು ಉಚ್ಚ ನ್ಯಾಯಾಲಯದ ಏಕ ನ್ಯಾಯಾಧೀಶ ಪೀಠವು ವಿಚಾರಣೆ ನಡೆಸತಕ್ಕುದು.][1]

**6. ಎರಡನೆಯ ಅಪೀಲುಗಳು:-** ಎಲ್ಲಾ ಎರಡನೆಯ ಅಪೀಲುಗಳನ್ನು ಉಚ್ಚ ನ್ಯಾಯಾಲಯದ ಏಕ ನ್ಯಾಯಾಧೀಶ ಪೀಠವು ವಿಚಾರಣೆ ಮಾಡತಕ್ಕುದು ಮತ್ತು ಇತ್ಯರ್ಥ ಮಾಡತಕ್ಕುದು:

ಪರಂತು, ನ್ಯಾಯಾಧೀಶರು, ಮೊಕದ್ದಮೆಯು ಕಾನೂನಿನ ಗಮನಾರ್ಹ ಪ್ರಶ್ನೆಯನ್ನೊಳಗೊಂಡಿದೆ ಅಥವಾ ನ್ಯಾಯೋದ್ದೇಶದ ದೃಷ್ಟಿಯಿಂದ ಆ ಮೊಕದ್ದಮೆಯು ನ್ಯಾಯಾಧೀಶರುಗಳ ಪೀಠದಿಂದ ವಿಚಾರಣೆಯಾಗಬೇಕು ಮತ್ತು ಇತ್ಯರ್ಥವಾಗಬೇಕು ಎಂಬ ಬಗ್ಗೆ ತಮಗೆ ಮನದಟ್ಟಾದರೆ ಆ ಎರಡನೇ ಅಪೀಲನ್ನು ಅಂಥ ಪೀಠಕ್ಕೆ ವಿಚಾರಣೆಗಾಗಿ ಮತ್ತು ಇತ್ಯರ್ಥಕ್ಕಾಗಿ ಕಳುಹಿಸಬಹುದು.

**7. ಅಭಿಪ್ರಾಯ ಕೋರಿ ಪೂರ್ಣ ಪೀಠಕ್ಕೆ ಒಪ್ಪಿಸುವುದು:-** (1) ಉಚ್ಚ ನ್ಯಾಯಾಲಯದ ಇಬ್ಬರಿಗೆ ಕಡಿಮೆಯಿಲ್ಲದ ನ್ಯಾಯಾಧೀಶರನ್ನೊಳಗೊಂಡ ಪೀಠವು, ತನ್ನ ಮುಂದೆ ಇತ್ಯರ್ಥವಾಗದೆ ಉಳಿದಿರುವ ಯಾವುದೇ ವ್ಯವಹರಣೆಯಲ್ಲಿ ಯಾವುದೇ ಕಾನೂನಿನ ಪ್ರಶ್ನೆ ಅಥವಾ ಕಾನೂನು ಬಲವುಳ್ಳ ಆಚರಣೆಯ ಪ್ರಶ್ನೆ ಉದ್ಭವಿಸಿದಲ್ಲಿ, ತಾನು ಸೂಕ್ತವೆಂದು ಭಾವಿಸಿದರೆ, ಕಾನೂನು ಅಥವಾ ಕಾನೂನು ಬಲವುಳ್ಳ ಆಚರಣೆಯ ಪ್ರಶ್ನೆಯನ್ನು ಪೂರ್ಣಪೀಠಕ್ಕೆ ಕಳುಹಿಸಬಹುದು ಮತ್ತು ಪ್ರಶ್ನೆಯ ಮೇಲೆ ಉಚ್ಚ ನ್ಯಾಯಾಲಯದ ಸದೃಶ ಪೀಠವು ಕೈಗೊಂಡ ಅಭಿಪ್ರಾಯವು ಭಿನ್ನವಾಗಿದ್ದಲ್ಲಿ ಹಾಗೆ ಕಳುಹಿಸುವುದು ಕಡ್ಡಾಯವಾಗಿರತಕ್ಕುದು.

(2) ಉಚ್ಚ ನ್ಯಾಯಾಲಯದ ಪೂರ್ಣ ಪೀಠದಲ್ಲಿ ಇರುವ ನ್ಯಾಯಾಧೀಶರುಗಳ ಬಹುಮತದ ತೀರ್ಮಾನವೇ ಉಚ್ಚ ನ್ಯಾಯಾಲಯದ ತೀರ್ಮಾನವಾಗಿರತಕ್ಕುದು.

**8. ಪುನರೀಕ್ಷಣಾ ಮೊಕದ್ದಮೆಗಳನ್ನು ಸ್ವತಃ ಇತ್ಯರ್ಥ ಮಾಡಲು ಅಥವಾ ಅದನ್ನು ನ್ಯಾಯ ಪೀಠಕ್ಕೆ ಕಳುಹಿಸಲು ಏಕ ನ್ಯಾಯಾಧೀಶ ಪೀಠದ ಅಧಿಕಾರಗಳು:-** (1) ಉಚ್ಚ ನ್ಯಾಯಾಲಯದ ನ್ಯಾಯಾಧೀಶ ಪೀಠವಾಗಿ ಕಾರ್ಯನಿರ್ವಹಿಸುವ ಯಾರೇ ನ್ಯಾಯಾಧೀಶರು, ಕಮಿಟ್ ಮಾಡುವ ಆದೇಶಗಳನ್ನು ರದ್ದುಪಡಿಸುವುದಕ್ಕೆ ಸಂಬಂಧಿಸಿದ ಮೊಕದ್ದಮೆಗಳನ್ನು ಹೊರತುಪಡಿಸಿ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ಉಚ್ಚ ನ್ಯಾಯಾಲಯದಲ್ಲಿ ನಿಹಿತವಾದ ಪುನರೀಕ್ಷಣಾ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಸಿವಿಲ್ ಮತ್ತು ಕ್ರಿಮಿನಲ್ ಪುನರೀಕ್ಷಣಾ ಮೊಕದ್ದಮೆಗಳ ವಿಚಾರಣೆ ನಡೆಸುವ ಮತ್ತು ಇತ್ಯರ್ಥ ಮಾಡುವ ಅಧಿಕಾರವನ್ನು ಹೊಂದಿರತಕ್ಕುದು:

ಪರಂತು, ಯಾವುದೇ ಕ್ರಿಮಿನಲ್ ನ್ಯಾಯಾಲಯದ ವ್ಯವಹರಣೆಗಳ ಸಂಬಂಧದಲ್ಲಿ ಅಂಥ ಪುನರೀಕ್ಷಣಾ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿದ ಅಂಥ ನ್ಯಾಯಾಧೀಶರ ಪೀಠವು ಮರಣ ದಂಡನೆ, ಆಜೀವ ಕಾರಾವಾಸ ಅಥವಾ ಏಳು ವರ್ಷಗಳಿಗೂ ಮೀರಿದ ಕಾರಾವಾಸ ದಂಡನೆಯನ್ನು ವಿಧಿಸತಕ್ಕುದಲ್ಲ.

(2) (1) ನೆಯ ಉಪ-ಪ್ರಕರಣದ ಮೇರೆಗಿನ ಮೊಕದ್ದಮೆಗಳಲ್ಲಿ ಏಕ ನ್ಯಾಯಾಧೀಶ ಪೀಠದ ತೀರ್ಮಾನ ಅಥವಾ ಆದೇಶವು ಅಂತಿಮವಾಗಿರತಕ್ಕುದು:

ಪರಂತು, ಅಂಥ ನ್ಯಾಯಾಧೀಶರು ಯಾವುದೇ ಅಂಥ ಮೊಕದ್ದಮೆಯನ್ನು ಮೇಲೆ ಹೇಳಲಾದ ರೀತಿಯಲ್ಲಿ ಇತ್ಯರ್ಥ ಮಾಡುವ ಬದಲು, ಅಂಥ ಮೊಕದ್ದಮೆಯನ್ನು ವಿಚಾರಣೆಗಾಗಿ ಮತ್ತು ಇತ್ಯರ್ಥಕ್ಕಾಗಿ ಇಬ್ಬರು ನ್ಯಾಯಾಧೀಶರುಗಳ ಪೀಠಕ್ಕೆ ಒಪ್ಪಿಸುವುದು ಸೂಕ್ತವೆಂದು ತಾನು ಭಾವಿಸಿದರೆ ಹಾಗೆ ಒಪ್ಪಿಸಬಹುದು.

1. 1994ರ ಅಧಿನಿಯಮ ಸಂಖ್ಯೆ 6ರ ಮೂಲಕ 8.3.1994 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**9. ಏಕ ನ್ಯಾಯಾಧೀಶ ಪೀಠದ ಇತರ ಅಧಿಕಾರಗಳು:–** ಈ ಕೆಳಕಂಡ ವಿಷಯಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದ ಅಧಿಕಾರಗಳನ್ನು ಏಕ ನ್ಯಾಯಾಧೀಶ ಪೀಠವು ಚಲಾಯಿಸತಕ್ಕುದು. ಪರಂತು, ಯಾವ ನ್ಯಾಯಾಧೀಶರ ಮುಂದೆ ವಿಚಾರಣೆಗಾಗಿ ವಿಷಯವನ್ನು ಒಪ್ಪಿಸಲಾಗಿದೆಯೋ ಆ ನ್ಯಾಯಾಧೀಶರು, ಅದನ್ನು ಇಬ್ಬರು ನ್ಯಾಯಾಧೀಶರ ಪೀಠದಿಂದ ವಿಚಾರಣೆಯಾಗಲಿ ಮತ್ತು ತೀರ್ಮಾನವಾಗಲಿ ಎಂದು ಮುಂದಕ್ಕೆ ಹಾಕಬಹುದು:-

(i) ಅಧಿಕಾರ ವ್ಯಾಪ್ತಿಯಿರುವ ವಿವಿಧ ನ್ಯಾಯಾಲಯಗಳ ಪೈಕಿ ಯಾವ ನ್ಯಾಯಾಲಯದಲ್ಲಿ ದಾವೆಯ ವಿಚಾರಣೆಯನ್ನು ನಡೆಸಬೇಕು ಎಂಬುದನ್ನು ತೀರ್ಮಾನಿಸುವುದು;

(ii) ನಿರ್ಗತಿಕರ ಅಪೀಲಿನ ಅಂಗೀಕಾರ;

(iii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ಮೂಲ ಅಧಿಕಾರ ವ್ಯಾಪ್ತಿಯ ಚಲಾವಣೆ;

(iv) ಸಿವಿಲ್ ಪ್ರಕ್ರಿಯಾ ಸಂಹಿತೆ, 1908 ರ ಮೊದಲ ಅನುಸೂಚಿಯ XLIII ನೇ ಆದೇಶದ 1ನೇ ನಿಯಮದ ಮೇರೆಗಿನ ಅಪೀಲುಗಳು;

(v) ವೆಚ್ಚಕ್ಕೆ ಸಂಬಂಧಿಸಿದಂಥ ವಸ್ತು ವಿಷಯವುಳ್ಳ ಅಪೀಲುಗಳು ಮಾತ್ರ;

(vi) ಅಪೀಲುಗಳು ಮತ್ತು ಇತರ ವ್ಯವಹರಣೆಗಳಲ್ಲಿ ವಾದ ಕಾಲೀನ ಸ್ವರೂಪದ ಯಾವುದೇ ವಿಷಯ;

(vii) ಕಾಲಪರಿಮಿತಿ ಕಾನೂನು ಮೂಲಕ ಅನುಮತಿಸಲಾದ ಅವಧಿಯು ಮುಕ್ತಾಯಗೊಂಡು ಹೂಡಲಾದ ಅಪೀಲಿನ ಅಂಗೀಕಾರ;

[1][(viii) ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರ ಅಧಿನಿಯಮ 2) 389 ನೇ ಪ್ರಕರಣ, 439ನೇ ಪ್ರಕರಣ ಮತ್ತು 440 ನೇ ಪ್ರಕರಣದ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸುವುದು;][1]

(ix) ಸಿವಿಲ್ ಪ್ರಕ್ರಿಯಾ ಸಂಹಿತೆ, 1908 ರ 24 ನೇ ಪ್ರಕರಣದ ಮೇರೆಗಿನ ಅಥವಾ [1][ದಂಡ ಪ್ರಕ್ರಿಯಾ ಸಂಹಿತೆ, 1973ರ (1974 ರ ಕೇಂದ್ರ ಅಧಿನಿಯಮ 2) 407 ನೇ ಪ್ರಕರಣದ ಮೇರೆಗಿನ][1] ಅಧಿಕಾರಗಳನ್ನು ಚಲಾಯಿಸುವುದು;

(x) [2][x x x ][2]

(xi) ವಾದಕಾಲೀನ ಆದೇಶಗಳ ಮೇಲೆ ಅಪೀಲು ಸಲ್ಲಿಸಲು ಕಾನೂನು ಅನುಮತಿಸಿದ್ದರೆ, ಅಂಥ ಅಪೀಲುಗಳು;

[3][(xii) (ಎ) ಹೇಬಿಯಸ್ ಕಾರ್ಪಸ್ ಸ್ವರೂಪದ ರಿಟ್ ನೀಡಿಕೆಗೆ ಸಂಬಂಧಿಸಿದಂಥ ಅಧಿಕಾರವನ್ನು ಹೊರತುಪಡಿಸಿ, ಭಾರತದ ಸಂವಿಧಾನದ 226ನೇ ಅನುಚ್ಛೇದದ (1)ನೇ ಖಂಡದ ಮೇರೆಗೆ; ಮತ್ತು

(ಬಿ) ಭಾರತದ ಸಂವಿಧಾನದ 227 ಮತ್ತು 228ನೆಯ ಅನುಚ್ಛೇದಗಳ ಮೇರೆಗೆ ಅಧಿಕಾರಗಳನ್ನು ಚಲಾಯಿಸುವುದು;][3]

(xiii) [4][x x x][4]

**10. ಇಬ್ಬರು ನ್ಯಾಯಾಧೀಶರನ್ನೊಳಗೊಂಡ ಪೀಠದ ಇತರ ಅಧಿಕಾರಗಳು:–** ಈ ಕೆಳಕಂಡ ವಿಷಯಗಳಿಗೆ ಸಂಬಂಧಿಸಿದಂತೆ, ಉಚ್ಚ ನ್ಯಾಯಾಲಯದ ಅಧಿಕಾರಗಳನ್ನು ಇಬ್ಬರು ನ್ಯಾಯಾಧೀಶರನ್ನೊಳಗೊಂಡ ಪೀಠವು ಚಲಾಯಿಸತಕ್ಕುದು:-

(i) (ಎ) ಸಿವಿಲ್ ಪ್ರಕ್ರಿಯಾ ಸಂಹಿತೆ, 1908 ರ 113ನೆಯ ಪ್ರಕರಣದ ಮೇರೆಗೆ;

[1][(ಬಿ) ದಂಡ ಪ್ರಕ್ರಿಯಾ ಸಂಹಿತೆ, 1973ರ (1974 ರ ಕೇಂದ್ರ ಅಧಿನಿಯಮ 2) 395ನೇ ಪ್ರಕರಣದ ಮೇರೆಗೆ;][1]

- ಕಳುಹಿಸಲಾಗುವ ವಿಷಯಗಳು;

(ii) ಸಿವಿಲ್ ಪ್ರಕ್ರಿಯಾ ಸಂಹಿತೆ, 1908 ರ ಮೊದಲ ಅನುಸೂಚಿಯ XLVನೇ ಆದೇಶದ 2ನೆಯ ನಿಯಮದ ಮೇರೆಗಿನ ಅರ್ಜಿ;

---

1. 1980ರ ಅಧಿನಿಯಮ ಸಂಖ್ಯೆ 13ರ ಮೂಲಕ 17-11-1980 ರಿಂದ ಜಾರಿಗೆಬರುವಂತೆ ಅಧಿಸೂಚನೆಯ ಮೂಲಕ ಪ್ರತಿಯೋಜಿಸಲಾಗಿದೆ. ಅಧಿಸೂಚನೆಯ ಪಾಠವು 5ನೇ ಪುಟದಲ್ಲಿದೆ.
2. 1980ರ ಅಧಿನಿಯಮ ಸಂಖ್ಯೆ 13ರ ಮೂಲಕ 17-11-1980 ರಿಂದ ಜಾರಿಗೆಬರುವಂತೆ ಬಿಟ್ಟುಬಿಡಲಾಗಿದೆ.
3. 1973ರ ಅಧಿನಿಯಮ ಸಂಖ್ಯೆ 12ರ ಮೂಲಕ 16-7-1973 ರಿಂದ ಜಾರಿಗೆಬರುವಂತೆ ಅಧಿಸೂಚನೆಯ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು 5ನೇ ಪುಟದಲ್ಲಿದೆ.
4. 1980ರ ಅಧಿನಿಯಮ ಸಂಖ್ಯೆ 13ರ ಮೂಲಕ ಸೇರಿಸಲಾಗಿದೆ ಮತ್ತು 1994ರ ಅಧಿನಿಯಮ ಸಂಖ್ಯೆ 6ರ ಮೂಲಕ 8-3-1994 ರಿಂದ ಜಾರಿಗೆಬರುವಂತೆ ಬಿಟ್ಟುಬಿಡಲಾಗಿದೆ.

(iii) [1][x x x ][1]

[2][(iv) ಭಾರತದ ಸಂವಿಧಾನದ 226ನೇ ಅನುಚ್ಛೇದದ (1)ನೇ ಖಂಡದ ಮೇರೆಗಿನ ಅಧಿಕಾರವು ಹೇಬಿಯಸ್ ಕಾರ್ಪಸ್ ಸ್ವರೂಪದ ರಿಟ್ ನೀಡುವುದಕ್ಕೆ ಸಂಬಂಧಪಟ್ಟಿರುವ ಸಂದರ್ಭದಲ್ಲಿ ಅಂಥ ಅಧಿಕಾರಗಳನ್ನು ಚಲಾಯಿಸುವುದು;

(ivಎ) ಭಾರತದ ಸಂವಿಧಾನದ 226ನೇ ಅನುಚ್ಛೇದದ (1)ನೇ ಖಂಡ, 227ನೇ ಅನುಚ್ಛೇದ ಮತ್ತು 228ನೇ ಅನುಚ್ಛೇದದ ಮೇರೆಗೆ ಅಧಿಕಾರಗಳನ್ನು ಚಲಾಯಿಸಿ ಏಕ ನ್ಯಾಯಾಧೀಶ ಪೀಠವು ಹೊರಡಿಸಿದ ಯಾವುದೇ ಮೂಲ ತೀರ್ಪು, ಆದೇಶ ಅಥವಾ ಡಿಕ್ರಿಯ ಮೇಲಿನ ಅಪೀಲು;][2]

(v) ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿ ಇರುವ ಯಾವುದೇ ಕಾನೂನಿನಲ್ಲಿ ವ್ಯಕ್ತವಾಗಿ ಉಪಬಂಧಿಸಿಲ್ಲದ ಎಲ್ಲ ಇತರ ವಿಷಯಗಳು.

**11. ಉಚ್ಚ ನ್ಯಾಯಾಲಯವು ರಿಜಿಸ್ಟರುಗಳನ್ನು ಇಡುವುದು:-** ಉಚ್ಚ ನ್ಯಾಯಾಲಯವು, ನ್ಯಾಯಾಲಯದ ವ್ಯವಹರಣೆಗಳಿಗಾಗಿ ಅಗತ್ಯವಿರುವಂತಹ ರಿಜಿಸ್ಟರುಗಳು, ಪುಸ್ತಕಗಳು ಮತ್ತು ಲೆಕ್ಕಪತ್ರಗಳನ್ನು ಇಟ್ಟಿರತಕ್ಕುದು ಮತ್ತು ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದಂತೆ ಸದರಿ ರಿಜಿಸ್ಟರುಗಳು, ಪುಸ್ತಕಗಳು ಮತ್ತು ಲೆಕ್ಕಪತ್ರಗಳ ಪ್ರತಿಗಳು ಅಥವಾ ಅವುಗಳಿಂದ ತೆಗೆದ ಭಾಗಗಳನ್ನು ಹಾಗೂ ಉಚ್ಚ ನ್ಯಾಯಾಲಯ ಮತ್ತು ಅದಕ್ಕೆ ಅಧೀನವಾದ ನ್ಯಾಯಾಲಯಗಳಲ್ಲಿ ನಿರ್ವಹಿಸಲಾದ ಕಾರ್ಯದ ವಿವರಣೆಗಳನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕುದು.

**12. ರಜಾ ಅವಧಿಯ ನ್ಯಾಯಾಧೀಶ:-** (1) ಉಚ್ಚ ನ್ಯಾಯಾಲಯದ ರಜಾ ಅವಧಿಯಲ್ಲಿ ಅಥವಾ ಅದನ್ನು ಮುಂದೆ ಹಾಕಲಾದ ಅವಧಿಯಲ್ಲಿ ಕೂಡಲೇ ಮತ್ತು ತುರ್ತಾಗಿ ವ್ಯವಹರಿಸಬೇಕಾದ ಅಗತ್ಯವಿರುವ ಎಲ್ಲ ವಿಷಯಗಳ ವಿಚಾರಣೆ ನಡೆಸುವುದಕ್ಕಾಗಿ ಮುಖ್ಯ ನ್ಯಾಯಾಧೀಶರು ಉಚ್ಚ ನ್ಯಾಯಾಲಯದ ನ್ಯಾಯಾಧೀಶರೊಬ್ಬರನ್ನು ರಜಾ ಅವಧಿಯ ನ್ಯಾಯಾಧೀಶರೆಂದು ನಾಮ ನಿರ್ದೇಶಿಸತಕ್ಕುದು ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಉಪಬಂಧದ ಮೇರೆಗೆ ಒಬ್ಬರಿಗಿಂತ ಹೆಚ್ಚಿನ ನ್ಯಾಯಾಧೀಶರು ಅಧಿಕಾರ ವ್ಯಾಪ್ತಿಯನ್ನು ಚಲಾಯಿಸ ಬೇಕಾಗಿರುವಂಥ ಮೊಕದ್ದಮೆಗಳನ್ನು ಹೊರತುಪಡಿಸಿ, ಅಂಥ ನ್ಯಾಯಾಧೀಶರು ರಜಾ ಅವಧಿಯಲ್ಲಿ ಉಚ್ಚ ನ್ಯಾಯಾಲಯದಲ್ಲಿ ನಿಹಿತವಾದ ಎಲ್ಲ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸತಕ್ಕುದು. ರಜೆ ಅಥವಾ ಮುಂದೂಡಿದ ಬೇರೆ ಬೇರೆ ಅವಧಿಗಳಿಗೆ ಬೇರೆ ಬೇರೆ ಏಕ ನ್ಯಾಯಾಧೀಶರನ್ನು ನೇಮಕ ಮಾಡಬಹುದು.

(2) ಉಚ್ಚ ನ್ಯಾಯಾಲಯದ ಯಾವುದೇ ರಜೆ ಮುಂದಕ್ಕೆ ಹಾಕಲಾದ ಅವಧಿಯಲ್ಲಿ ಯಾವುದೇ ಮೊಕದ್ದಮೆಯ ವಿಚಾರಣೆ ನಡೆಸುವುದಕ್ಕಾಗಿ ನ್ಯಾಯಾಧೀಶರ ಪೀಠ ಅಥವಾ ಪೂರ್ಣ ಪೀಠವನ್ನು ರಚಿಸಲು ಮುಖ್ಯ ನ್ಯಾಯಾಧೀಶರು ಸಕ್ಷಮರಾಗಿರತಕ್ಕುದು.

**13. ಇತ್ಯರ್ಥವಾಗದ ವ್ಯವಹರಣೆಗಳ ಸಂಬಂಧದಲ್ಲಿ ಈ ಅಧಿನಿಯಮವನ್ನು ಅನ್ವಯಿಸುವುದು:-** ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಉಚ್ಚ ನ್ಯಾಯಾಲಯದಲ್ಲಿ ಇತ್ಯರ್ಥವಾಗದೆ ಉಳಿದಿರುವ ಎಲ್ಲ ಅಪೀಲುಗಳು, ಅರ್ಜಿಗಳು ಮತ್ತು ಇತರ ವ್ಯವಹರಣೆಗಳನ್ನು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಇತ್ಯರ್ಥ ಮಾಡತಕ್ಕುದು.

**14. ನಿರಸನ:-** ಮೈಸೂರು ಉಚ್ಚ ನ್ಯಾಯಾಲಯ ಅಧಿನಿಯಮ, 1884 (1884ರ ಮೈಸೂರು ಅಧಿನಿಯಮ 1) ರ 11, 12, 13, 14, 15, 16, 16ಎ, 16ಬಿ, 20 ಮತ್ತು 22ನೇ ಪ್ರಕರಣಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

## ಅಧಿಸೂಚನೆಗಳು

## I

**ಬೆಂಗಳೂರು, ದಿನಾಂಕ 10ನೇ ಜುಲೈ, 1973 [ಸಂಖ್ಯೆ ಜಿಎಡಿ 60 ಎಸ್‌ಎಚ್‌ಸಿ 73]**

**ಎಸ್.ಓ. 1116:-** ಮೈಸೂರು ಉಚ್ಚ ನ್ಯಾಯಾಲಯ (ತಿದ್ದುಪಡಿ) ಅಧಿನಿಯಮ, 1973 (1973ರ ಮೈಸೂರು ಅಧಿನಿಯಮ ಸಂಖ್ಯೆ 12) 1ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮೈಸೂರು ಸರ್ಕಾರ, 1973ರ ಜುಲೈ 16ನೇ ದಿವಸವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರು ಹೆಸರಿನಲ್ಲಿ,
ಆರ್.ಜಿ. ರೆಬೆಲ್ಲೊ
ಸರ್ಕಾರದ ಮುಖ್ಯ ಕಾರ್ಯದರ್ಶಿ.

(ಕರ್ನಾಟಕ ರಾಜ್ಯಪತ್ರ (ವಿಶೇಷ) ದಿನಾಂಕ 11ನೇ ಜುಲೈ 1973ರ ಭಾಗ -IV -2 ಸಿ (ii) ಸಂಖ್ಯೆ 582 ರಲ್ಲಿ ಪ್ರಕಟಿಸಲಾಗಿದೆ).

1. 1980ರ ಅಧಿನಿಯಮ ಸಂಖ್ಯೆ 13ರ ಮೂಲಕ 17-11-1980 ರಿಂದ ಜಾರಿಗೆಬರುವಂತೆ ಬಿಟ್ಟುಬಿಡಲಾಗಿದೆ.
2. 1973ರ ಅಧಿನಿಯಮ ಸಂಖ್ಯೆ 12ರ ಮೂಲಕ 16-7-1973 ರಿಂದ ಜಾರಿಗೆಬರುವಂತೆ ಪ್ರತಿಯೋಜಿಸಲಾಗಿದೆ.

II

**ಬೆಂಗಳೂರು, ದಿನಾಂಕ 10ನೇ ನವೆಂಬರ್ 1980 [ಸಂಖ್ಯೆ ಲಾ 247 ಎಲ್‌ಸಿಇ 80]**

ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ಅಧಿನಿಯಮ, 1979ರ (1980ರ ಕರ್ನಾಟಕ ಅಧಿನಿಯಮ 13) 1ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1980ರ ನವೆಂಬರ್ ಹದಿನೇಳನೇ ದಿವಸವನ್ನು ಸದರಿ ಉಪ ಪ್ರಕರಣದ ಉದ್ದೇಶಕ್ಕಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಬಿ. ನಾಗೇಶ್‌ರಾವ್
ಸರ್ಕಾರದ ಉಪ ಕಾರ್ಯದರ್ಶಿ,
ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ (ಆಡಳಿತ)

(ಕರ್ನಾಟಕ ರಾಜ್ಯಪತ್ರ (ವಿಶೇಷ)ದಿನಾಂಕ 10ನೇ ನವೆಂಬರ್ 1980ರ ಭಾಗ -IV -2 ಸಿ (ii) ಸಂಖ್ಯೆ 819 ರಲ್ಲಿ ಪ್ರಕಟಿಸಲಾಗಿದೆ).

The above translation of the Karnataka High Court Act, 1961 (5 of 1962) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963)

Bangalore
Date: 16-07-2004

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಜಿ. ದಕ್ಷಿಣಾಮೂರ್ತಿ
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 451

**HEALTH AND FAMILY WELFARE SECRETARIAT**
**NOTIFICATION**
**No. HFW 117 IMM 2004 Bangalore, dated: 17th July 2004**

Where as the Hon'ble High Court of Karnataka in the Judgement dated: 25.06.2004 in Writ Petition No. 2445/2004 has directed the Government of Karnataka to appoint Director of Health Services to hold the post of controlling Authority Drug Controller, till a regular appointment is made.

And where as Dr. G.B. Desai, Director, Health & Family Welfare Services, Bangalore has been placed in additional charge of the post of Drugs Controller vide Notification No. DPAR 97 Se E Mu 2004, dated: 15.7.2004.

I. In Supersession of Government Notification No. HFW 57 IMM 2003, dated 17.7.2003 and in exercise of powers conferred under relevant Rules made under part VII. VIII. XB and Part XIV of the Drugs Cosmetics Rules made under the provisions of Drugs and Cosmetics Act. 1940 (Central Act). Government of Karnataka hereby appoints Dr. G.B. Desai, Drugs Controller (I/C) to be the ''Licensing Authority'' for the State of Karnataka.

Further in exercise of powers conferred under Rule 150B of part XV(A) of the Drugs and Cosmetics Rules made 1945 under the provisions of Drugs and Cosmetics Act 1940 (Central Act) Government of Karnataka hereby appoints Dr. G.B. Desai, Drugs Controller (I/C) to be ''Approving Authority'' for the purpose of Part XV (A) of the Drugs and Cosmetics Rules for the whole State of Karnataka.

II. In exercise of powers conferred under Section 21(4) of Drugs and Cosmetics Act read with Rule 50(2) of Drugs and Cosmetics Rules, Government of Karnataka hereby appoints Dr. G.B. Desai, Drugs Controller (I/C) to be ''Controlling Authority'' for the purpose of Chapter IV of the Drugs and Cosmetics Act 1940 and Rules made thereunder.

III. In exercise of powers conferred under Rule 59(1) of Drugs and Cosmetics Rules, Government of Karnataka hereby appoints Dr. G.B. Desai Drugs Controller (I/C) to be ''Licensing Authority'' for the entire State of Karnataka for the purpose of Part VI of the Drugs and Cosmetics Rules in addition to officers already notified vide Government Order No. HFW 18 IMM 92, dated: 24.3.1994.

By Order and in the name of the Governor of Karnataka,
**CHOMANAYAK. G.**
Under Secretary to Government,
Health & Family Welfare Department.

PR-450